# ಶ್ರೀ ರಾಮಕೃಷ್ಣ ಉಪನಿಷತ್

ಚಕ್ರವರ್ತಿ ರಾಜಗೋಪಾಲಾಚಾರಿ



ಪ್ರಕಾಶಕರು :

ಶ್ರೀ ರಾಮಕೃಷ್ಣ ಆಶ್ರಮ

ಮೈಸೂರು

[ ಬೆಲೆ ರೂ. ೧-೪-೦

# ಪ್ರಕಾಶಕರ ಬಿನ್ನಹ

ಚಕ್ರವರ್ತಿ ರಾಜಗೋಪಾಲಾಚಾರಿಯವರು ತಮಿಳು ಜನರಿಗೆ ಬರೆದ ಗ್ರಂಥದ ಕನ್ನಡ ಅನುವಾದ ಇದು. ಇದನ್ನು ಕನ್ನಡದಲ್ಲಿ ಈ ಆಶ್ರಮದ ಮೂಲಕ ಪ್ರಕಟಿಸಿರುವೆವು. ಅವರು ತಮಿಳು ಜನರಿಗೆ ಹೇಳಿದುದು ಕನ್ನಡ ಜನರಿಗೂ ಅನ್ವಯಿಸುವುದೆಂದು ಯೋಚಿಸಿ ಅವರ ಬರವಣಿಗೆಯನ್ನು ಕನ್ನಡಿಗರಿಗೆ ಈ ಗ್ರಂಥದ ಮೂಲಕ ಪರಿಚಯಮಾಡಿಕೊಟ್ಟಿದೆ.

ಪರಮಹಂಸರ ಉಪದೇಶ ಗ್ರಂಥ ಪಾಂಡಿತ್ಯದಿಂದ ಬಂದುದಲ್ಲ. ಅಧ್ಯಾತ್ಮ ಅನುಭವಗಳ ಅಂತರಾಳದಿಂದ ಹರಿದು ಬಂದ ಅಮರ ಗಂಗಾನದಿ. ಪಂಡಿತನಿಂದ ಪಾಮರನವರೆಗೆ ಇದು ರುಚಿಸುವುದು. ಪರಮಹಂಸರ ಮಾತಿನಷ್ಟೇ ಸರಳವಾಗಿದೆ ರಾಜಗೋಪಾಲಾಚಾರಿಯವರ ಬರವಣಿಗೆ. ಈಗ ತಾನೆ ದಾಸ್ಯವಿಮೋಚನೆ ಪಡೆದ ಭರತಖಂಡ, ಯಾವ ಪರಮಹಂಸರ ಸಂದೇಶವನ್ನು ಅನುಸರಿಸಿದರೆ ಅತಿ ಪೂಜ್ಯ ಸ್ಥಾನವನ್ನು ಪಡೆಯಬಹುದೋ ಆ ದೃಷ್ಟಿಯಿಂದ ಆರಿಸಿ ಇಲ್ಲಿ ವಿವರಿಸಿರುವರು.

ಇದನ್ನು ತಮಿಳಿನಿಂದ ಸುಲಲಿತವಾಗಿ ಅನುವಾದ ಮಾಡಿಕೊಟ್ಟ ಶ್ರೀಮತಿ ಸುಂದರಿ ಕೃಷ್ಣಸ್ವಾಮಿಯವರಿಗೆ ಆಶ್ರಮದ ಧನ್ಯವಾದ.

ಪ್ರಕಾಶಕರು,
ಶ್ರೀ ರಾಮಕೃಷ್ಣ ಆಶ್ರಮ
ಮೈಸೂರು.

# ಮುನ್ನುಡಿ

ಕೆಲವು ದಿನಗಳ ಹಿಂದೆ, ಅಂದರೆ ದೆಹಲಿಯಿಂದ ಈ ವರುಷದಾದಿಯಲ್ಲಿ ನಾನು ಊರಿಗೆ ಬಂದ ಮೇಲೆ ಕಲ್ಕಿ ಪತ್ರಿಕೆಯಲ್ಲಿ ಭಗವಾನ್ ಶ್ರೀರಾಮಕೃಷ್ಣರ ಉಪದೇಶಗಳನ್ನು ನಾನು ತಿಳಿದುಕೊಂಡಿರುವ ಮಟ್ಟಿಗೆ ತಮಿಳು ಭಾಷೆಯಲ್ಲಿ ಸ್ವಲ್ಪ ಸ್ವಲ್ಪವಾಗಿ ವಿವರಿಸಿ ಬರೆದೆನು. ನಾನು ಅನುಮಾನದಿಂದ ಬರೆದ ಅಧ್ಯಾಯಗಳನ್ನು ಓದಿದ ಮಿತ್ರರು ನನ್ನ ಭಾಷಾಂತರ ಚೆನ್ನಾಗಿದೆಯೆಂದು ನನ್ನನ್ನು ಉತ್ಸಾಹಗೊಳಿಸಿದರು. ಶ್ರೀರಾಮಕೃಷ್ಣ ಭಗವಾನರ ಉಪದೇಶವನ್ನು ವಿವರಿಸಿ ಹೇಳುವ ಭಾಗ್ಯ ನನಗೆ ಲಭಿಸಿದುದು ದೇವರ ಕೃಪೆಯಲ್ಲದೆ ಬೇರಲ್ಲ.

ಈ ಶ್ರೀರಾಮಕೃಷ್ಣ ಉಪದೇಶವಿವರಣೆ ಮೂವತ್ತೈದು ಅಧ್ಯಾಯಗಳನ್ನೊಳಗೊಂಡು ದೀಪಾವಳಿಯಂದು ಮುಕ್ತಾಯಗೊಂಡಿತು. ಅವನ್ನು ಪುಸ್ತಕರೂಪದಲ್ಲಿ ಪ್ರಕಟಗೊಳಿಸಬೇಕೆಂಬ ನನ್ನ ಅಭಿಲಾಷೆ ಮದರಾಸಿನಲ್ಲಿರುವ ಶ್ರೀರಾಮಕೃಷ್ಣ ಮಠಾಧಿಕಾರಿಗಳ ಮಹತ್ಕೃಪೆಯಿಂದ ನೆರವೇರಿತು ನಾನು ಬರೆದ ಬರಹವನ್ನು ಮಠಾಧಿಕಾರಿಗಳು ಅಂಗೀಕರಿಸಿದುದು ನನ್ನ ಅದೃಷ್ಟವೇ ಸರಿ. ಯಮಧರ್ಮರಾಜ ನಚಿಕೇತನಿಗೆ ಪರವಸ್ತುವಿನ ಇರವು ಶಾಸ್ತ್ರವನ್ನೋದಿದ ಮಾತ್ರದಿಂದಲೇ ಆಗಲಾರದು; ಬುದ್ಧಿಸೂಕ್ಷ್ಮದಿಂದಲೂ, ಕಲಿತ ವಿದ್ಯೆಯಿಂದಲೂ ವಾದ ಪ್ರತಿವಾದಗಳಿಂದಲೂ ಆತ್ಮಜ್ಞಾನವುಂಟಾಗುವುದಿಲ್ಲ ಎಂದು ಹೇಳಿದನಲ್ಲವೇ? ಅದಕ್ಕೆ ಭಗವಂತನ ಕೃಪೆಬೇಕು; ಹೃದಯ ಕರಗಿ ನೀರಾಗಬೇಕು; ಭಕ್ತಿಯಿರಬೇಕು. ಭಕ್ತಿ ಬೇರೆ, ಶಾಸ್ತ್ರ ಪಾಂಡಿತ್ಯ ಬೇರೆ. ಸಂಸ್ಕೃತ ಪುಸ್ತಕಗಳನ್ನೋದಿ ಶ್ಲೋಕಗಳನ್ನು ಜಲಪ್ರವಾಹದೋಪಾದಿಯಲ್ಲಿ ಸುರಿದೊಪ್ಪಿಸಬಹುದು. ಆಚಾರ್ಯರು ಬರೆದಿಟ್ಟಿರುವ ಭಾಷ್ಯಗಳನ್ನು ತಲೆಕೆಳಗಾಗಿ ಒಪ್ಪಿಸುವಂಥಹ ಪಾಂಡಿತ್ಯವನ್ನು ಪಡೆಯಬಹುದು. ಆದರೆ ಧರ್ಮಜೀವನವೂ ಸ್ಥಿರಭಾವವೂ ಬೇರೆ. ಹೃದಯಪರಿಪಕ್ವವನ್ನು ಹೊಂದದವನ ವಿದ್ಯೆಯೂ ಶಾಸ್ತ್ರ ಪ್ರವಚನವೂ ಕಪಿಚೇಷ್ಟೆಗಳೇ ಹೊರತು ಬೇರಲ್ಲ. ಹೃದಯಾಂತರಾಳದಲ್ಲಿ ಜ್ಞಾನವಿರಬೇಕು. ಅದಿಲ್ಲದಿದ್ದರೆ ಎಷ್ಟೇ ವಿದ್ಯೆಯಿದ್ದರೂ ಪ್ರಯೋಜನವಾಗುವುದಿಲ್ಲ.

ಒಳಗಿನ ಮತ್ತು ಹೊರಗಿನ ಐಕ್ಯತೆಯೇ ಜ್ಞಾನ. ಅದಿಲ್ಲದ ವಿದ್ಯೆ ಕಪಿಚೇಷ್ಟೆಯೇ ಸರಿ. ಶ್ರೀರಾಮಕೃಷ್ಣರ ಉಪದೇಶ ನಿಜ ಜ್ಞಾನವನ್ನು ನೀಡುವುದು.

ಹಿರಿಯರೂ ಕಿರಿಯರೂ ಶ್ರೀರಾಮಕೃಷ್ಣರ ಉಪದೇಶವನ್ನೋದಿ ಲಾಭವನ್ನು ಪಡೆಯಲೆಂದಾಶಿಸುವೆನು.

೧೫–೧೧–೧೯೫೦ ಚಕ್ರವರ್ತಿ ರಾಜಗೋಪಾಲಾಚಾರಿ.



# ವಿಷಯಾನುಕ್ರಮಣಿಕೆ

# ಶ್ರೀ ರಾಮಕೃಷ್ಣ ಉಪನಿಷತ್

೧

## ಪರವಸ್ತು

ಶ್ರೀರಾಮಕೃಷ್ಣ ಪರಮಹಂಸರ ಉಪದೇಶ ಉಪನಿಷತ್ತಿಗೆ ಸಮಾನವೆಂದರೆ ಅತಿಶಯೋಕ್ತಿಯಲ್ಲ. ಹಿಂದಿನ ಕಾಲದ ಋಷಿಗಳನ್ನು ಹೋಲುವ ತಪೋಧನರೊಬ್ಬರು ನಮ್ಮೀಕಾಲದಲ್ಲಿ ಅವತರಿಸಿದರು. ಅವರೇ ರಾಮಕೃಷ್ಣ ಪರಮಹಂಸರು. ಅವರು ಗ್ರಂಥವಾವುದನ್ನೂ ಬರೆಯಲಿಲ್ಲ; ಪ್ರಸಂಗಗಳನ್ನೂ ಮಾಡಲಿಲ್ಲ. ಪೂರ್ಣ ಸನ್ಯಾಸ ಜೀವನವನ್ನು ಕೈಗೊಂಡು ಬಾಳಿ ಮರೆಯಾದರು. ಭಕ್ತಿಯಿಂದ ಅವರ ಬಳಿ ಕುಳಿತು ಆಲಿಸಿದ ಶಿಷ್ಯರೊಡನೆ ಅವರಾಡಿದ ಮಾತುಗಳೇ ಅವರ ಉಪದೇಶ. ಅವರ ಆ ಮಾತನ್ನು ಕೇಳಿದ ಶಿಷ್ಯರು ಬಳಿಕ ಆ ಉಪದೇಶಗಳನ್ನು ಬರೆದಿಟ್ಟಿರುವರು.

ಓದಿದ ವಿದ್ಯಾವಂತರೂ ನುರಿತ ಬರಹಗಾರರು ಒಳ್ಳೆಯ ವಾಕ್ಯಗಳನ್ನೂ ಉಪದೇಶಗಳನ್ನೂ ಬರೆಯಬಲ್ಲರು. ಆದರೆ ಅಂತಹವುಗಳಿಗೆ ನಿಜವಾದ ಶಕ್ತಿಯೂ ಸ್ಫೂರ್ತಿಯೂ ಇರುವುದಿಲ್ಲ. ಶ್ರೀರಾಮಕೃಷ್ಣರು ತಮ್ಮೊಳಗೆ ಮತ್ತು ಹೊರಪ್ರಪಂಚದ ಸಮಸ್ತ ವಸ್ತುವಿನಲ್ಲಿಯೂ ಕೂಡ ಭಗವಂತನ ಸಾಕ್ಷಾತ್ಕಾರವನ್ನು ಕಂಡ ಮಹಾತ್ಮರು. ನಾವು ಒಬ್ಬರನ್ನೊಬ್ಬರು ನೋಡುವಾಗ ಎಷ್ಟು ದೃಢ ನಿಶ್ಚಯದಿಂದ ಕೂಡಿದ ಅರಿವಿನಿಂದ ನೋಡುತ್ತೇವೆಯೋ ಅದೇ ರೀತಿಯಲ್ಲಿಯೇ ಶ್ರೀ ರಾಮಕೃಷ್ಣರು ಸಮಸ್ತ ಸೃಷ್ಟಿಯಲ್ಲಿಯೂ ಭಗವಂತನನ್ನು ನೋಡಿದರು. ಇಂತಹ ಅಪೂರ್ವ ಜ್ಞಾನಿಗಳು ಹಲವಾರು ದೇಶಗಳಲ್ಲಿ ಆಗಿಂದಾಗ್ಯೆ ಅವತರಿಸುತ್ತಾರೆ.

ಭಗವಂತನಲ್ಲಿ ಬಾಳಿದವರ ಮಾತಿಗೇ ಒಂದು ಪ್ರತ್ಯೇಕ ಶಕ್ತಿಯಿರುತ್ತದೆ. ಅಂತಹವರ ಉಪದೇಶಕ್ಕೆ ಇರುವ ಶಕ್ತಿ ಬರಿಯ ವಿದ್ಯಾಶಿಕ್ಷಿತರಾದ ಪಂಡಿತರ ಧರ್ಮೋಪದೇಶಕ್ಕೆ ಇರುವುದಿಲ್ಲ. ಮಹರ್ಷಿಗಳ ಮಾತಿನಲ್ಲಿ ಅವರ ಇಡೀ ಬಾಳ್ವೆಯ ಧ್ವನಿ ಕೇಳ ಬರುತ್ತದೆ, ಬರಿಯ ಅರಿವಿನ ಧ್ವನಿ ಮಾತ್ರವಲ್ಲ. ಮೀಮಾಂಸವಾದಗಳೂ, ವಿಮರ್ಶನಗಳೂ ಎಷ್ಟು

ಸುಂದರವಾಗಿ ಅರ್ಥಪೂರಿತವಾಗಿ ಇದ್ದರೂ ದೇವರ ಪರಿಪೂರ್ಣ ಕೃಪೆಯನ್ನು ಹೊಂದಿದ ಮಹಾತ್ಮರ ಶಕ್ತಿಪೂರಿತವಾದ ಸಂಭಾಷಣೆಗೆ ಎಣೆಯಾಗಲಾರವು.

ಶ್ರೀ ರಾಮಕೃಷ್ಣಪರಮಹಂಸರ ಈ ಉಪದೇಶ ವಾಕ್ಯಗಳನ್ನು ತಮಿಳು ದೇಶದ ಮಕ್ಕಳಿಗೆ ತಿಳಿಯಪಡಿಸಬೇಕೆಂಬ ಅಭಿಲಾಷೆ ನನಗುಂಟಾಯಿತು. ಅವರ ಈ ವರುಷದ ಜನ್ಮ ದಿನದ ಸಂಭ್ರಮದಲ್ಲಿ ಮದರಾಸಿನ ಶ್ರೀರಾಮಕೃಷ್ಣರ ಮಠಾಧಿಕಾರಿಗಳ ಕೋರಿಕೆಯಂತೆ ನಾನು ಅಧ್ಯಕ್ಷತೆಯನ್ನು ವಹಿಸಿ ಸಭೆಯಲ್ಲಿ ಮಾತನಾಡುವಾಗ ನನಗೆ ಈ ಯೋಚನೆ ಹೊಳೆಯಿತು. ತಮಿಳಿನಲ್ಲಿ ಪ್ರಕಟವಾಗಿರುವ ಹಲವಾರು ಗ್ರಂಥಗಳ ಮೂಲಕ ಭಗವಾನ್ ಶ್ರೀರಾಮಕೃಷ್ಣರ ಉಪದೇಶಗಳನ್ನು ತಮಿಳು ಮಕ್ಕಳು ಅರಿತಿರುವರು. ಆದರೂ, ಅವುಗಳಿಂದ ಆರಿಸಿ ತೆಗೆದು ಮತ್ತೊಂದು ಸಲ ಅವನ್ನು ವಿವರಿಸಿ ಹೇಳ ಹೊರಟಿರುವುದು ನನ್ನ ಆತ್ಮತೃಪ್ತಿಗಾಗಿ. "ವ್ಯಾಸರ ಔತನ" ವನ್ನೂ ಹೀಗೆಯೇ ಆರಂಭಿಸಿ ಬರೆದೆನು. ಅದು ಅಣುಮಾತ್ರವಾದರೂ ಇತರರಿಗೆ ಉಪಯೋಗವಾಗಿರಬಹುದೆಂದೇ ಎಣಿಸುತ್ತೇನೆ. ಅದೇ ರೀತಿಯಲ್ಲಿ ಈ ಗ್ರಂಥವೂ ಕೂಡ ಒಂದು ವೇಳೆ ಪ್ರಯೋಜನಕಾರಿಯಾಗಬಹುದು.

ನಮ್ಮ ದೇಶ ಸ್ವಾತಂತ್ರ್ಯ ಪಡೆದಾಯಿತು. ಸ್ವಾತಂತ್ರ್ಯದ ಜೊತೆಗೆ ಸುಖವೂ ಇರಬೇಕಾದರೆ ಜನರು ಜ್ಞಾನ ಮಾರ್ಗದಲ್ಲಿ ಸ್ಥಿರವಾಗಬೇಕು. ಹಾಗೆ ನಿಂತರೆ ಸುಖವನ್ನೂ ಎಣೆಯಿಲ್ಲದ ಕೀರ್ತಿಯನ್ನೂ ಪಡೆಯುತ್ತೇವೆ. "ದೇವರೆಂದರೇನು? ಸ್ವಾಮಿ ಯೆಲ್ಲಿರುವನು?" ಎಂದು ಅನೇಕರು ಈ ಕಾಲದಲ್ಲಿ ಧೈರ್ಯವಾಗಿ ಕೇಳುತ್ತಾರೆ. ಇದು ನಮ್ಮ ದೌರ್ಭಾಗ್ಯವೇ ಸರಿ. ನಾವು ನೋಡುವ ಪ್ರಪಂಚವೂ ಅದರಲ್ಲಿಯ ಅತ್ಯಾಶ್ಚರ್ಯ ವಸ್ತುಗಳೂ ಶಕ್ತಿಗಳೂ ಒಂದರಿಂದೊಂದು ಉಂಟಾಗುವುದನ್ನು ನೋಡುತ್ತೇವೆ. ಎಲ್ಲವೂ ಒಂದು ನಿಯಮ ಪ್ರಕಾರ ಕೆಲಸಮಾಡಿ ಸುತ್ತಿ ಬರುತ್ತವೆ. ನಿಯಮವು ತಾನೇ ಹೇಗೆ ಉಂಟಾಗಬಲ್ಲುದು? ಎಲ್ಲದಕ್ಕೂ ಕಾರಣವಾದ ಬೀಜವೊಂದಿಲ್ಲದೆ ಇವೆಲ್ಲಾ ಉಂಟಾಗುವುದು ಸಾಧ್ಯವಿಲ್ಲ. ಶೂನ್ಯದಿಂದ ವಸ್ತುವೋ ಶಕ್ತಿ ನಿಯಮಗಳೋ ಬರಲಾರವು, ಅಲ್ಲವೆ? ನಾವು ಗ್ರಹಿಸಿ ವಿವರಿಸಲಾರದಂಥಹ ಸ್ವರೂಪವುಳ್ಳ ಒಂದು ಕಾರಣ ಇದ್ದೇ ತೀರಬೇಕು. ಇದನ್ನೇ ಪರವಸ್ತುವೆನ್ನುತ್ತೇವೆ. "ನಿಯಮ ಅಥವಾ ಕಾನೂನು ಪ್ರಕೃತಿಯ ಸ್ವಭಾವದಲ್ಲೇ ಇರುವುದು; ಇದಕ್ಕೆ ದೇವರೊಬ್ಬನ ಆವಶ್ಯಕತೆಯೇ ಇರುವುದಿಲ್ಲ" ಎಂಬು

ದಾಗಿ ವಾದಿಸಿ ದೇವರಿಗೆ ಬದಲಾಗಿ ಪ್ರಕೃತಿಯನ್ನು ಕೊಂಡಾಡುವುದರಲ್ಲಿ ಏನೂ ಅರ್ಥವಿಲ್ಲ.

ಕಣ್ಣಿಗೆ ಕಾಣಿಸುವುದಿಲ್ಲವೆಂಬುದೇ ದೇವರಿಲ್ಲವೆಂದು ಹೇಳಲು ಕಾರಣ ವಾಗಬಲ್ಲುದೆ? ರಾತ್ರಿಯ ಹೊತ್ತು ನಕ್ಷತ್ರಗಳು ಗುಂಪು ಗುಂಪಾಗಿ ಕಿಕ್ಕಿರಿದು ಕಾಣಿಸುತ್ತವೆ. ಹಗಲು ಹೊತ್ತಿನಲ್ಲಿ ಅವು ಮರೆಯಾಗುತ್ತವೆ. ನಮ್ಮ ಕಣ್ಣಿನಿಂದ ಕಾಣದ ವಸ್ತುಗಳಾವುದೂ ಇಲ್ಲವೇ ಇಲ್ಲವೆಂದು ಸಾಧಿಸ ಬಲ್ಲೆವೆ? ನಮಗೆ ಇನ್ನೂ ದೇವರು ಕಾಣದ ಕಾರಣ ದೇವರೇ ಇಲ್ಲ, ಇರಬೇ ಕಾದ ಆವಶ್ಯಕತೆಯೂ ಇಲ್ಲವೆಂಬುದಾಗಿ ಸಾಧಿಸಬೇಡಿ.

ಶ್ರೀರಾಮಕೃಷ್ಣರು ಒಂದು ದಿವಸ ಹೀಗೆ ಹೇಳಿದರು: "ಒಂದು ಪಟ್ಟಣವನ್ನು ಸೇರಿದೊಡನೆಯೇ ಪ್ರಯಾಣಿಕನು ತಾನು ಇಳಿದುಕೊಂಡ ಜಾಗದಲ್ಲಿ ಹಾಸಿಗೆ ಪೆಟ್ಟಗೆಗಳನ್ನಿಟ್ಟು ಬಳಿಕ ಊರು ಸುತ್ತಲು ಹೋಗು ತ್ತಾನೆ. ಹಗಲೆಲ್ಲಾ ಸುತ್ತಿ ಅಲೆದನಂತರ ರಾತ್ರಿಯಾದೊಡನೆ ತಾನಿಳಿದ ಜಾಗಕ್ಕೆ ಮತ್ತೆ ಬಂದು ಮಲಗುತ್ತಾನೆ. ಹೀಗೆ ಮೊದಲೇ ತಂಗುವುದ ಕ್ಕಾಗಿ ಮರಳಿ ಒಂದು ಜಾಗವನ್ನೇರ್ಪಡಿಸಿಕೊಳ್ಳದಿದ್ದಲ್ಲಿ, ಹಗಲೆಲ್ಲಾ ತಮಾಷೆ ನೋಡಿದ ಮೇಲೆ ರಾತ್ರಿ ಹೊತ್ತು ಮಲಗಲು ಸ್ಥಳವಿಲ್ಲದೆ ಬಹಳ ಕಷ್ಟವಾಗುವುದು. ಇಡೀ ಪ್ರಪಂಚದಲ್ಲೆಲ್ಲಾ ಸುತ್ತಿ ಅಲೆಯುವ ಮಾನ ವನ ಮನಸ್ಸಿಗೆ ದೇವರೇ ತಂಗುವ ಜಾಗ. ಈ ವಿಶ್ರಾಂತಿಭವನವನ್ನು ಭದ್ರ ಪಡಿಸಿಕೊಳ್ಳುವುದೇ ಕ್ಷೇಮ. ಹಾಗೆ ಮಾಡದಿದ್ದಲ್ಲಿ ಸಂತೋಷ ಶಾಂತಿ ನಾಶವಾಗಿ ದುಃಖವುಂಟಾಗುವುದು. ಮಗನೇ! ಬಾಳಿನ ಸುಖವೆಲ್ಲಾ ಮುಗಿದು ಅಂಧಕಾರ ಕವಿಯುವ ಕಾಲ ಬರುವುದು. ಆಗ ಮನಸ್ಸು ನೆಮ್ಮದಿಯನ್ನು ಪಡೆಯಲು ಒಂದು ಆಶ್ರಯ ಬೇಕು. ದೇವರೆಂಬ ಆಶ್ರಯ ಸ್ಥಳವನ್ನು ನಾವು ಚೆನ್ನಾಗಿ ಅರಿತುಕೊಳ್ಳಬೇಕು."

ಕೊಳದಲ್ಲಿ ಕುಡಿಯುವುದಕ್ಕಾಗಿ ತಣ್ಣೀರನ್ನು ತೆಗೆದುಕೊಳ್ಳುವಾಗ ಹಗುರವಾದ ಮೇಲಿನ ತಿಳಿನೀರನ್ನು ತೆಗೆಯಬೇಕೇಯಲ್ಲದೆ, ಕೆಸರನ್ನು ಬಗೆದು ನೀರನ್ನೆತ್ತಬಾರದು. ಮನಸ್ಸು ಶುದ್ಧವಾಗಿ ಧರ್ಮ ಜೀವನವನ್ನು ಬಾಳಬಯಸಿದರೆ ದೃಢಭಕ್ತಿಯಿಂದ ಧ್ಯಾನೋಪಾಸನೆಗಳನ್ನು ಕೈಗೊಂಡು ಮೆಲ್ಲಮೆಲ್ಲನೆ ಮುಂದುವರಿಯಬೇಕು. ಶಾಸ್ತ್ರ, ಪ್ರವಚನ, ಮೀಮಾಂಸ, ತತ್ತ್ವ, ವಾದಗಳಲ್ಲಿ ಕಾಲವನ್ನು ಕಳೆಯುತ್ತಾ ತಲೆಯನ್ನು ಕೆಡಿಸಿಕೊಳ್ಳ

ಬೇಡಿ. ನಮ್ಮ ಮನಸ್ಸಿನ ಅಲ್ಪಜ್ಞಾನ ಒಂದು ಚಿಕ್ಕ ಕೊಳದ ನೀರಿನ ಹಾಗೆ; ಜಾಸ್ತಿ ಕಲಕಿದರೆ ಬರಿಯ ಕೆಸರೇ ಮೇಲೆ ಬರುವುದು.

ಮೊಸರಿನಲ್ಲಿ ಬೆಣ್ಣೆಯಿದೆ ಎಂಬ ವಿಷಯ ಸಕಲರಿಗೂ ಗೊತ್ತಿದೆ. ಆದರೆ ಮೊಸರನ್ನು ಕಡೆದರೆ ಮಾತ್ರ ಬೆಣ್ಣೆ ಬರುವುದು. ಇಲ್ಲದೆ, "ಮೊಸರಿನಲ್ಲಿ ಬೆಣ್ಣೆಯಿದೆ," "ಮೊಸರಿನಲ್ಲಿ ಬೆಣ್ಣೆಯಿದೆ" ಎಂದು ಎಷ್ಟು ಕಿರಿಚಿಕೊಂಡರೂ ಬೆಣ್ಣೆ ಬರುವುದಿಲ್ಲ. ಪರವಸ್ತುವನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕಾದರೆ ಭಕ್ತಿಯಿಂದ ಹೃದಯಾಂತರಾಳದಲ್ಲಿ ಬಯಸ ಬೇಕು. "ಪರಮಾತ್ಮ" "ಜೀವಾತ್ಮ" ಎಂದು ತತ್ತ್ವ ವಿಚಾರ ಮಾಡುತ್ತಿದ್ದರೆ ಮಾತ್ರ ಸಾಲದು. ತಾಯನ್ನು ಕಾಣದ ಮಗು ತಾಯನ್ನು ಕಾಣಬಯಸಿ ಹಂಬಲಿಸುವ ಹಾಗೆ ಭಗವಂತನನ್ನು ಸಾಧಿಸಬೇಕೆಂದು ಹೃದಯ ಬಯಸಿ ಕರಗಬೇಕು.

## ೨
## ಮತ ಭೇದ

"ಹಲವು ರೀತಿ ನಾವು ದೇವರನ್ನು ಉಪಾಸನೆಮಾಡಿ ಅವನ ದರ್ಶನ ವನ್ನೂ ಕೃಪೆಯನ್ನೂ ಪಡೆಯಬಹುದು. ನದಿಗೆ ಅನೇಕ ಸ್ನಾನ ಘಟ್ಟಗಳಿ ರುವುವಲ್ಲವೆ? ಆನಂದ ಪ್ರವಾಹವಾಗಿ ಹರಿಯುವ ಪರವಸ್ತುವೆಂಬ ನದಿ ಯಲ್ಲಿಯೂ ಅನೇಕ ಸ್ನಾನಘಟ್ಟಗಳಿವೆ. ಯಾವ ಘಟ್ಟದಲ್ಲಿ ಬೇಕಾದರೂ ಇಳಿದು ನೀರನ್ನು ಕುಡಿಯಬಹುದು, ಸ್ನಾನ ಮಾಡಬಹುದು. ಯಾವ ಮತದಿಂದಾಗಲಿ ಯಾವ ವಿಧಾನದಿಂದಾಗಲಿ ಮನಸ್ಸಿನಲ್ಲಿ ಶುದ್ಧವಾದ ಭಕ್ತಿ ಶ್ರದ್ಧೆಗಳಿದ್ದರೆ ದೇವರನ್ನು ಪಡೆಯಬಹುದು. ಒಂದು ಮನೆಯ ಮಾಳಿಗೆಗೆ, ಮೆಟ್ಟಲನ್ನು ಹತ್ತಿ ಹೋಗಬಹುದು, ಏಣಿಯನ್ನು ಹತ್ತಿಯೂ ಹೋಗ ಬಹುದು, ಅಥವಾ ಹಗ್ಗವನ್ನು ಕಟ್ಟಿ ಅದನ್ನು ಹಿಡಿದುಕೊಂಡೂ ಹತ್ತಿ ಹೋಗಬಹುದು, ಹೀಗೆ ಹಲವಾರು ಮತಗಳು ಹಲವಾರು ದಾರಿಗಳನ್ನು ತೋರಿಸಿಕೊಡುತ್ತವೆ."

"ಜನರು ಅವರವರ ಮತಕ್ಕನುಗುಣವಾಗಿ ದೇವರನ್ನು ಉಪಾಸನೆ ಮಾಡುವುದು ಒಳ್ಳೆಯದು. ಕ್ರಿಶ್ಚಿಯನ್ನರು ಯೇಸು ಕ್ರಿಸ್ತನು ತೋರಿಸಿ ಕೊಟ್ಟಿರುವ ಮಾರ್ಗವನ್ನೂ, ಮುಸ್ಲಿಂ ಜನರು ಮಹಮದ್ ಹೇಳಿದ

ಮಾರ್ಗವನ್ನೂ, ಹಿಂದುಗಳು ನಮ್ಮ ಋಷಿಗಳು ಉಪದೇಶಿಸಿದ ತತ್ತ್ವ ಮಾರ್ಗವನ್ನೂ ಅನುಸರಿಸುವುದೇ ಮೇಲು. ಭಕ್ತಿಯಿಂದ ಬಾಳುವ ಮಕ್ಕಳು ಯಾವ ಮತದವರಾದರೂ ಸರಿ, ಅನ್ಯ ಮತದವರನ್ನು ವಿನಯ ಗೌರವಗಳಿಂದ ನೋಡುವರು. ಎಲ್ಲಾ ಮಾರ್ಗಗಳೂ ನಮ್ಮನ್ನು ಪರ ವಸ್ತುವಿನೆಡೆಗೆ ಕರೆದೊಯ್ಯುವುವು. ”

ಹೀಗೆಂದು ಶ್ರೀರಾಮಕೃಷ್ಣ ಪರಮಹಂಸರು ನೂರು ವರುಷಗಳ ಹಿಂದೆ ಉಪದೇಶ ಮಾಡಿದರು. ಎರಡು ಸಾವಿರ ವರುಷಗಳ ಹಿಂದೆ ಅಶೋಕ ಚಕ್ರವರ್ತಿ ಕಲ್ಲಿನಲ್ಲಿ ಕೆತ್ತಿಸಿದ ಶಾಸನಗಳಲ್ಲಿಯೂ ಇದನ್ನೇ ನೋಡುತ್ತೇವೆ.

“ದೇವ ಪ್ರೀತಿಪಾತ್ರನಾದ ಪ್ರಿಯದರ್ಶನನ ಶಾಸನ: ಅರಸರು ಎಲ್ಲಾ ಸನ್ಯಾಸಿಗಳನ್ನೂ, ಸಂಸಾರ ನಡೆಸುವ ಗೃಹಸ್ಥರನ್ನೂ, ಅವರು ಯಾವ ಮತದವರಾದರೂ ಕೂಡ, ಅವರಿಗೆ ಉಚಿತ ದಾನಾದಿಗಳನ್ನು ಕೊಟ್ಟೂ ಇನ್ನೂ ಹಲವಾರು ವಿಧಗಳಲ್ಲಿಯೂ ಗೌರವಿಸಿ ಸಂತೋಷಗೊಳಿಸುತ್ತಾರೆ. ಮಹಾರಾಜರಿಗೆ ಎಲ್ಲದಕ್ಕಿಂತಲೂ ಸಂತೋಷವನ್ನುಂಟುಮಾಡುವುದು ಯಾವುದೆಂದರೆ, ಎಲ್ಲಾ ಮತದವರೂ ಅವರವರ ಮಾರ್ಗಕ್ಕನುಗುಣವಾಗಿ ಅವರ ಆತ್ಮಶಕ್ತಿಯನ್ನು ವಿಕಾಸಪಡಿಸಿಕೊಳ್ಳುವುದು. ಒಬ್ಬನು ಅನೇಕ ವಿಧದಲ್ಲಿ ಆತ್ಮಶಕ್ತಿಯನ್ನು ವೃದ್ಧಿ ಪಡಿಸಿಕೊಳ್ಳಬಹುದು. ಆದರೆ ಇವೆಲ್ಲಕ್ಕೂ ಮೂಲಭೂತವಾದ ವಿಷಯ ಒಂದುಂಟು. ಅದೇನೆಂದರೆ; ತನ್ನ ಮತವನ್ನು ಮೇಲ್ಪಡಿಸುವ ಸಲುವಾಗಿ ಇತರರ ಮತವನ್ನು ಅಲ್ಲಗಳೆಯಬೇಕೆಂದೆನಿಸುವುದು ಸಹಜ. ಆದರೆ ಹಾಗೆ ಮಾಡದೆ, ಸಮಯ ದೊರೆತ ಹಾಗೆಲ್ಲಾ ಅನ್ಯಮತದವರನ್ನು ಗೌರವಿಸಿ ಕೊಂಡಾಡಬೇಕು. ಹೀಗೆ ಮಾಡುವುದರಿಂದ ಇತರ ಮತದವರಿಗೆ ಸಹಾಯ ನೀಡುವುದಲ್ಲದೆ ತನ್ನ ಮತದ ಕೀರ್ತಿಯನ್ನೂ ಬೆಳೆಸುತ್ತಾನೆ. ಹೀಗೆ ಮಾಡದೆ ಒಬ್ಬನು ಅನ್ಯ ಮತದವರನ್ನು ಅಲ್ಲಗಳೆದು ಅಗೌರವಿಸಿದರೆ ತನ್ನ ಮತಕ್ಕೇ ಹಾನಿಯುಂಟು ಮಾಡುತ್ತಾನೆ. ಇತರ ಮಾರ್ಗಗಳನ್ನು ದೂಷಿಸಿದ ಫಲವಾಗಿ ತನ್ನ ಮಾರ್ಗಕ್ಕೆ ಕೀರ್ತಿಯನ್ನು ತರಬಲ್ಲನೆ? ಅದೆಂದಿಗೂ ಸಾಧ್ಯವಿಲ್ಲ. ಸ್ವಮತ ಪ್ರಾಮುಖ್ಯತೆ ಇದರಿಂದ ಖಂಡಿತ ಮಲಿನವಾಗುವುದು. ವೃದ್ಧಿಯಾಗಲಾರದು. ಒಬ್ಬೊಬ್ಬರೂ ಅವರವರ ಧರ್ಮ ತತ್ತ್ವಗಳನ್ನು ಚೆನ್ನಾಗಿ ಅರಿತು ಆ ಮಾರ್ಗದಲ್ಲಿ ಭಕ್ತಿಯನ್ನು ವೃದ್ಧಿಪಡಿಸಿಕೊಳ್ಳಬೇಕು. ಇದೇ ಅಶೋಕ

ರಾಜ ಪ್ರಿಯದರ್ಶನನ ಕೋರಿಕೆಯೆಂಬುದಾಗಿ ಸಕಲರೂ ಪ್ರಚಾರ ಪಡಿಸಲಿ."

ಅನೇಕ ಸಾವಿರ ವರುಷಗಳ ಹಿಂದೆ ಭಗವದ್ಗೀತೆಯ ಮೂಲಕ ಕೃಷ್ಣನು ಮಾಡಿದ ಉಪದೇಶವೂ, ಅದರ ಬಳಿಕ ಅಶೋಕಚಕ್ರವರ್ತಿಯ ಹನ್ನೆರಡನೆಯ ಕಲ್ಲು ಶಾಸನವೂ, ಅನಂತರ ಶ್ರೀ ರಾಮಕೃಷ್ಣ ಪರಮ ಹಂಸರ ಉಪದೇಶವೂ, ಮತ್ತು ನಮ್ಮ ಮಧ್ಯೆ ಜನಿಸಿ ನಮಗೆ ಅನೇಕ ವಿಧದಲ್ಲಿ ಮಾರ್ಗದರ್ಶಕರಾದ ಗಾಂಧಿ ಮಹಾತ್ಮರು ಬೋಧಿಸಿದ ತತ್ತ್ವಗಳೂ, ಎಲ್ಲವೂ ಒಂದೇ ವಿಧವಾಗಿ ಸ್ವಚ್ಛವಾಗಿ ಇರುವುವು. ಇದರಂತೆ ಆ ಕಟ್ಟಳೆಯನ್ನು ದೃಢ ಮನಸ್ಸಿನಿಂದ ಕೈಗೊಂಡು ಪಾಲಿಸೋಣ.

* * * * *

ಇಬ್ಬರು ಹುಡುಗರು ಒಂದು ಮರದ ಮೇಲಿದ್ದ ಹೆಂಟೇಗೊದ್ದನ ಬಣ್ಣವನ್ನು ಕುರಿತು ಜಗಳವಾಡುತ್ತಿದ್ದರು.

"ಚೆನ್ನಾಗಿ ನೋಡು. ಆ ಹೆಂಟೇಗೊದ್ದನ ಬಣ್ಣ ಕೆಂಪು; ನೀನು ಕುರುಡನ ಹಾಗೆ ಅದನ್ನು ಹಳದಿಯೆನ್ನುತ್ತಿ" ಎಂದು ಒಬ್ಬನು ಹೇಳಿದನು.

"ಎಲಾ ಹುಚ್ಚ! ಕುರುಡ ನೀನು. ಹಳದಿ ಬಣ್ಣದ ಹೆಂಟೇಗೊದ್ದನನ್ನು ಕೆಂಪು ಎನ್ನುತ್ತೀಯಲ್ಲಾ!" ಎಂದು ಮತ್ತೊಬ್ಬನು ಹಾಸ್ಯಮಾಡಿದನು.

ಹೀಗೆಯೇ ಇವರ ಜಗಳ ದೊಡ್ಡದಾಯಿತು. ಬಳಿಕ ಅವರಿಬ್ಬರೂ ಆ ತೋಟದಲ್ಲಿ ಒಂದು ಗುಡಿಸಲಲ್ಲಿದ್ದ ಒಬ್ಬ ಮುದುಕಿಯ ಬಳಿಗೆ ಮಧ್ಯಸ್ಥಿಕೆಗೆ ಹೋದರು.

"ನಿಮ್ಮ ಜಗಳವೇನು?" ಎಂದು ಮುದುಕಿ ಕೇಳಿದಳು.

"ಆ ಮರದಲ್ಲಿ ನೋಡು! ಒಂದು ಕೆಂಪು ಹೆಂಟೇಗೊದ್ದ ಕಾಣಿಸುತ್ತದೆಯಲ್ಲವೆ? ಇವನು ಅದನ್ನು ಹಳದಿಯೆನ್ನುತ್ತಾನೆ. ನಾನು ಕುರುಡನಂತೆ. ನೀನೇ ನೋಡಿ ಹೇಳು. ನೀನು ಹೇಳಿದರೆ ಒಂದು ಸಮಯ ಈ ಮುಠ್ಠಾಳ ಒಪ್ಪಿಯಾನು!" ಎಂದು ಕೆಂಪು ಬಣ್ಣದ ವಾದಿ ಹೇಳಿದನು.

"ಅಮ್ಮಾ! ನೀನೇ ನೋಡು. ಹಳದಿ ಬಣ್ಣದ ಹೆಂಟೇಗೊದ್ದನನ್ನು ಈ ಮೂಢ ಕೆಂಪು ಬಣ್ಣವೆಂದು ಹರಟುತ್ತಾನೆ" ಎಂದು ಅವನ ಪ್ರತಿವಾದಿಯೆಂದನು.

ಮುದುಕಿ ನಗುತ್ತಾ ಹೇಳಿದಳು: "ನೀವಿಬ್ಬರು ಹೇಳುವುದೂ ನಿಜ

ಸುಮ್ಮನೆ ಜಗಳವಾಡಬೇಡಿ. ಆ ಹೆಂಟೇಗೊದ್ದ ಅನೇಕ ಬಣ್ಣಗಳನ್ನು ತಾಳಬಲ್ಲುದು. ಅದರ ಬಣ್ಣ ಆಗಾಗ್ಯೆ ಬದಲಾಯಿಸುವುದನ್ನೂ ನಾನು ನೋಡಿದ್ದೇನೆ. ಹೋಗಿ, ಜಗಳವನ್ನು ಬಿಡಿ."

ದೇವರನ್ನು ಭಕ್ತಿಯ ಕಣ್ಣಿನಿಂದ ನೋಡಿ ಅನುಭವಿಸಿದ ಮಹಾತ್ಮರಿಗೆ ದೇವರು ಸಾಕಾರ ನಿರಾಕಾರ ಮತ್ತು ಅನೇಕ ರೂಪವುಳ್ಳವನೂ ಎಂಬ ವಿಷಯ ಚೆನ್ನಾಗಿ ಗೊತ್ತು. ದೇವರನ್ನು ಕಾಣದೆ ಮಾತಿನಲ್ಲಿ ಶೌರ್ಯ ವನ್ನು ತೋರಿಸುವ ಮತವಾದಿಗಳಿಗೆ ದೇವರ ಸ್ವರೂಪ ಅಣುಮಾತ್ರವೂ ಗೋಚರವಾಗದು. ತಮ್ಮ ಅಹಂಕಾರದ ಸ್ವರೂಪವನ್ನೇ ದೇವರೆಂದು ಭಾವಿಸಿ ಅವರು ಬರಿಯ ಮಾತಿನಲ್ಲೇ ಕಾಲ ಕಳೆಯುವರು.

ನಾಲ್ಕು ಜನ ಕುರುಡರು ಒಬ್ಬ ಮಠಾಧಿಪತಿಯ ಬಳಿಗೆ ಭಿಕ್ಷೆಗೆ ಹೋದರು. ಅಲ್ಲಿದ್ದ ಒಂದು ಆನೆಯನ್ನು ಮುಟ್ಟಿನೋಡಿದರು. ಮಾವ ಟಿಗನು ಇವರನ್ನು ಹಾಸ್ಯಮಾಡುತ್ತಾ, "ಆನೆಯು ಹೇಗಿರುವುದು?" ಎಂದು ಕೇಳಿದನು.

ಕಾಲನ್ನು ಮುಟ್ಟಿ ನೋಡಿದ ಕುರುಡ "ಈ ಮೃಗ ಒಂದು ಕಂಭದ ಹಾಗಿದೆ" ಎಂದನು.

"ಛೀ! ಇದು ಒಂದು ಮರದ ಕೊಂಬೆಯ ಹಾಗಲ್ಲವೇ ಇರುವುದು? ಕಂಭದ ಹಾಗಿದೆಯೆಂದು ಹರಟುತ್ತೀಯಲ್ಲಾ!" ಎಂದು ಸೊಂಡಿಲನ್ನು ಮುಟ್ಟಿನೋಡಿದ ಕುರುಡ ಹೇಳಿದನು.

"ಇದೇನು ನೀವು ಹೇಳುತ್ತಿರುವುದು? ಈ ಆನೆ ಒಂದು ಪೀಪಾಯಿನ ಆಕಾರವಾಗಿದೆ, ಸಂದೇಹವೇ ಇಲ್ಲ" ಎಂದು ಆನೆಯ ಹೊಟ್ಟೆಯನ್ನು ಸವರಿನೋಡಿದ ಕುರುಡ ಸಾಧಿಸಿದನು.

ನಾಲ್ಕನೆಯವನೋ, ಆನೆಯ ಕಿವಿಯನ್ನು ಮುಟ್ಟಿ ನೋಡುತ್ತಾ, "ಬಹಳ ಚೆನ್ನಾಗಿದೆ ನೀವು ಹೇಳುವುದು! ಒಂದು ಮೊರದ ಆಕಾರವಾಗಿ ರುವ ಈ ಪ್ರಾಣಿಯನ್ನು ಪೀಪಾಯಿ, ಕಂಭ, ಕೊಂಬೆಯೆಂದೆಲ್ಲಾ ವರ್ಣಿ ಸುತ್ತೀರಲ್ಲಾ!" ಎಂದು ನಗುತ್ತಾ ಹಾಸ್ಯಮಾಡಿದನು.

ಪರವಸ್ತುವಿನ ಸ್ವರೂಪವನ್ನು ಕುರಿತು ಜಗಳವಾಡುವ ಕುರುಡರ ಅಲ್ಪ ಜ್ಞಾನವೂ ಇಂತಹುದು.

೩

# ಹಾವಿನ ಹತ್ತಿರ ಹೋಗಬೇಡ!

ದೊಡ್ಡ ವ್ಯಾಪಾರಿಯೊಬ್ಬರು ಪರಮಹಂಸರೆಡೆಗೆ ಬಂದು, "ಸ್ವಾಮಿ! ನಾನು ನನ್ನ ಸ್ವತ್ತುಗಳನ್ನೆಲ್ಲಾ ನನ್ನ ಕುಟುಂಬದವರಿಗೆ ಬರೆದಿಟ್ಟಿದ್ದೇನೆ. ವ್ಯಾಪಾರದ ಕೆಲಸ ಯಾವುದನ್ನೂ ನಾನೀಗ ಇಟ್ಟುಕೊಂಡಿಲ್ಲ. ಆದರೂ ಭಗವಂತನು ನನಗೆ ಇನ್ನೂ ದರ್ಶನವನ್ನು ದಯಪಾಲಿಸಲಿಲ್ಲ. ಇದಕ್ಕೇನು ಕಾರಣವೋ! ಸಕಲವನ್ನೂ ತ್ಯಾಗಮಾಡಿದನಂತರ ದೇವರನ್ನು ನೋಡ ಲಾಗುವುದೆಂದು ಹೇಳುತ್ತಾರಲ್ಲಾ!" ಎಂದು ಪೇಚಾಡಿದರು.

ಅದಕ್ಕೆ ಶ್ರೀ ರಾಮಕೃಷ್ಣರು, "ಶೆಟ್ಟರೇ! ಹಳೆಯ ಎಣ್ಣೆಯ ಕೊಡವನ್ನು ಸಂಪೂರ್ಣವಾಗಿ ಖಾಲಿಮಾಡಿದ್ದರೂ ಕೂಡ ತಳದಲ್ಲಿ ಸ್ವಲ್ಪ ಎಣ್ಣೆ ನಿಂತೇ ಇರುವುದು. ಬಹುಕಾಲ ಎಣ್ಣೆಯಲ್ಲಿ ನೆನೆದ ಕೊಡ ಸ್ವಲ್ಪ ಎಣ್ಣೆಯನ್ನು ಹೀರುವುದು. ಈ ಎಣ್ಣೆಯನ್ನು ತೆಗೆಯುವುದಕ್ಕಾಗುವುದಿಲ್ಲ, ಮತ್ತು ಎಣ್ಣೆಯ ವಾಸನೆಯೇ ಇಲ್ಲದಂತೆ ಕೊಡವನ್ನು ತೊಳೆಯುವುದ ಕ್ಕಾಗುವುದಿಲ್ಲ. ಹಾಗೆಯೇ ಹಲವಾರು ವರುಷ ಪ್ರಾಪಂಚಿಕ ವ್ಯಾಪಾರ ದಲ್ಲಿ ಮಿಂದು ಬಾಳಿದ ನೀವು ನೆನೆಸಿದ ಮಾತ್ರಕ್ಕೆ ಸಂಸಾರವಾಸನೆಯನ್ನು ಸುಲಭವಾಗಿ ತೊರೆಯುವುದು ಸಾಧ್ಯವಲ್ಲ. ಆಸ್ತಿಯನ್ನೆಲ್ಲಾ ಬರೆದಿಟ್ಟಿದ್ದರೂ ಕೂಡ ನಿಮ್ಮ ಮನಸ್ಸಿನಲ್ಲಿ ಊರಿನಿಂತ ಪ್ರಾಪಂಚಿಕ ಮೋಹ ಇಷ್ಟು ಬೇಗ ಅಳಿಸಿ ಹೋಗಲಾರದು" ಎಂದು ಉಪದೇಶಿಸಿದರು.

ಸ್ವತ್ತುಗಳನ್ನೆಲ್ಲಾ ಬರೆದಿಟ್ಟ ಮಾತ್ರಕ್ಕೆ ಒಬ್ಬ ಸನ್ಯಾಸಿಯಾಗಲಾರ. ಆಸ್ತಿಯನ್ನು ಬರೆದಿಡುವುದಕ್ಕೆ "ನಿಶ್ಚಿಂತನಾಗಿರಬಹುದಲ್ಲಾ!" ಎಂಬಾ ಸೆಯ ಬಲವೇ ಸಾಕು. ಹಣ, ಬಾಂಧವ್ಯ, ಕಾಮಗಳ ಮೋಹವೆಲ್ಲಾ ಸಂಪೂರ್ಣವಾಗಿ ಮನಸ್ಸನ್ನು ಬಿಟ್ಟು ಹೋದನಂತರ ಭಗವಂತನ ಮೇಲೆ ಉಕ್ಕಿ ಬರುವ ಪ್ರೇಮ ಪೂರ್ಣವಾದ ಜ್ಞಾನದಲ್ಲಿ ನೆಲೆಸುವುದು ಬೇರೆ ವಿಷಯ.

ಮನಸ್ಸು ಪಕ್ವವಾಗುವ ಮೊದಲೇ, ಸಕಲವನ್ನೂ ತ್ಯಜಿಸಿ, ಅನಂತರ ತ್ಯಾಗಮಾಡಿದ ವಸ್ತುಗಳನ್ನೇ ಬಯಸುತ್ತಾ ಕಷ್ಟಪಡುವುದೂ, ಲೋಕಾಪ ವಾದಕ್ಕೆ ಹೆದರಿ ಮನಸ್ಸಿನ ಕಳವಳ ಹೊರಗೆ ಗೊತ್ತಾಗದಂತೆ ತ್ಯಾಗಿಯ

ವೇಷವನ್ನು ನಟಿಸುವುದೂ ಸನ್ಯಾಸವಲ್ಲ. ಇದಕ್ಕಿಂತಲೂ ಸಂಸಾರದಲ್ಲಿ ಯೋಗ್ಯವಾಗಿ ಬಾಳುವುದೇ ಮೇಲು.

ಹಾವಿರುವ ಬಿಲಗಳಿಂದಕೂಡಿದ ಹಳೆಯ ಮನೆಯಲ್ಲಿ ವಾಸಮಾಡಬೇಕಾದರೆ ಎಷ್ಟು ಜಾಗ್ರತೆಯಿಂದ ಇರುತ್ತವೆಯೊ ಹಾಗೆಯೇ ಬಾಳ್ವೆಯಲ್ಲಿ ತುಂಬಿರುವ ಕಾಮ ಲೋಭಗಳೆಂಬ ವಿಷವಸ್ತುಗಳನ್ನು ಕುರಿತು ಬಹಳ ಜಾಗ್ರತೆಯಿಂದಿರಬೇಕು. ಹುತ್ತದಲ್ಲಿ ಅಡಗಿದ್ದು ಅಕಸ್ಮಾತ್ತಾಗಿ ಹೊರಗೆ ಬಂದು ಮನುಷ್ಯನನ್ನು ಕಚ್ಚಿ ಕೊಲ್ಲುವ ನಾಗರಹಾವಿನಂತೆಯೇ ಹಣದಾಸೆಯೂ ಕಾಮ ಶಕ್ತಿಯೂ ಅನಿರೀಕ್ಷಿತ ವೇಳೆಯಲ್ಲಿ ಮನುಷ್ಯನನ್ನು ಹಿಡಿದು ಪಾತಾಳಕ್ಕೆಳೆಯುವುವು. ಜ್ಞಾನಿಗಳಾಗಿದ್ದರೂ ಜಾಗ್ರತೆಯಿಂದಿರಬೇಕು. ಎಡಬಿಡದೆ ಪರಮಾತ್ಮನ ಧ್ಯಾನದಲ್ಲಿ ಮನಸ್ಸನ್ನು ಸ್ಥಿರಗೊಳಿಸಬೇಕು. ಹಿಂದೆ ಗ್ರಾಮವಾಸಿಗಳು ಸರ್ಪವನ್ನು ಕಂಡರೆ, "ಅಮ್ಮಾ ದೇವಿ! ಬಾಲವನ್ನು ತೋರಿಸಿ ಹೋಗು, ಹೆಡೆಯೆತ್ತದೆ ಹೋಗು!" ಎಂಬ ಅರ್ಥವುಳ್ಳ ಮಂತ್ರವನ್ನು ಹೇಳುತ್ತಿದ್ದರು. ಹಾವೂ ಹೊರಟುಹೋಗುತ್ತಿತ್ತು. ಕಾಮದ ಬಯಕೆಯನ್ನು ವಿಷಸರ್ಪದಂತೆಯೇ ತಿಳಿಯಬೇಕು. ಅದರೊಡನೆ ಹುಡುಗಾಟನಾಡಬಾರದು. ಅದನ್ನು ಬಿಟ್ಟು ದೂರಸರಿದು ನಿಲ್ಲುವುದೇ ವಿವೇಕ. "ನಾನು ವಿವೇಕಿ. ನಾನೇಕೆ ಹೆದರಬೇಕು? ಇದರಿಂದ ಏನು ಅಪಾಯವುಂಟಾಗಬಲ್ಲುದು? ಇಷ್ಟು ದೂರ ಮಾತ್ರ ಹೋಗಿ ನಿಲ್ಲುವ, ಮುಂದೆ ಹೋಗುವುದಿಲ್ಲ," ಎಂದು ಭಾವಿಸುವುದು ಅವಿವೇಕವೇ ಸರಿ. ಹಾವಿನ ಹತ್ತಿರ ಸರಿದರೆ ಅದು ಖಂಡಿತವಾಗಿಯೂ ಕಚ್ಚಿಯೇ ತೀರುವುದು.

* * * *

ಒಬ್ಬ ಧನವಂತ ಶ್ರೀರಾಮಕೃಷ್ಣರೆಡೆಗೆ ಹೋಗಿ, "ನಾನು ತಮಗೆ ಸಮೃದ್ಧಿಯಾಗಿ ಧನಸಹಾಯವನ್ನು ಮಾಡಬೇಕೆಂದಿದ್ದೇನೆ. ಇಗೋ, ಈ ಹುಂಡಿಯನ್ನು ಸ್ವೀಕರಿಸಿ, ಅವಶ್ಯವಾದಂತೆ ಖರ್ಚಿಗೆ ಉಪಯೋಗಿಸಬಹುದು," ಎಂದನು. ಈತನೇನೋ ಒಳ್ಳೆಯ ಮನಸ್ಸಿನಿಂದಲೇ ಹೀಗೆ ಕೇಳಿಕೊಂಡನು. ಆದರೆ ಶ್ರೀರಾಮಕೃಷ್ಣರು ಇದಕ್ಕೆ ಒಪ್ಪಲಿಲ್ಲ.

"ಬೇಡ! ನಿಮ್ಮ ಹಣವನ್ನು ನಾನು ಸ್ವೀಕರಿಸಿದರೆ ಆ ಹಣ ವಿಚಾರದಲ್ಲಿಯೇ ಮನಸ್ಸು ಅಲೆಯುವುದು. ನನ್ನ ಮನಸ್ಸು ಈ ವಿಧವಾಗಿ ಕಷ್ಟಕ್ಕೆ ಸಿಕ್ಕಿ ಬೀಳಬೇಕಾಗುವುದು" ಎಂದು ಹುಂಡಿಯನ್ನು ನಿರಾಕರಿಸಿದರು.

ದನವಂತನು ಪುನಃ, "ಸತ್ಪಾತ್ರರನ್ನು ನೋಡಿ ದಾನ ಮಾಡ

ಬೇಕೆಂದು ನನಗೆ ಆಸೆಯಿರುವುದು. ಇದಕ್ಕೆ ತಾವು ಏಕೆ ಅಡ್ಡಿ ಮಾಡು ವಿರಿ? ತಾವು ಹಣವನ್ನು ಮುಟ್ಟ ಬೇಡಿ. ತಮ್ಮ ಕೆಲಸಕ್ಕೆ ತೃಪ್ತಿಕರ ವಾಗಿಯೂ ನಿರಾತಂಕವಾಗಿಯೂ ನೆರವೇರುವ ಸಲುವಾಗಿ ತಮ್ಮ ಬಂಧು ಗಳೊಬ್ಬರ ಹೆಸರಿನಲ್ಲಿ ಈ ಹಣವನ್ನು ಬ್ಯಾಂಕಿನಲ್ಲಿಡಲು ಅಪ್ಪಣೆ ಕೊಡಿಸ ಬೇಕು. ಇದಕ್ಕೇನೂ ತಮ್ಮ ಆಕ್ಷೇಪಣೆಯಿರಲಾರದು. ನನ್ನ ಮೇಲೆ ಕೃಪೆಯಿಟ್ಟು ಇದಕ್ಕೆ ಒಪ್ಪಬೇಕು ;" ಎಂದು ಬೇಡಿಕೊಂಡನು.

ಶ್ರೀರಾಮಕೃಷ್ಣರು ಇದಕ್ಕೂ ಒಪ್ಪಲಿಲ್ಲ. "ನೀವು ಹೇಳುವ ಈ ಏರ್ಪಾಟಿಗೂ ನಾನೇ ಹಣವನ್ನು ಸ್ವೀಕರಿಸುವುದಕ್ಕೂ ವ್ಯತ್ಯಾಸವೇನಿರು ವುದು? ಸತ್ಯವನ್ನು ಮೋಸಮಾಡುವುದಕ್ಕಾದೀತೆ? ನಾನು ನೇರವಾಗಿ ನಿಮ್ಮ ಹಣವನ್ನು ತೆಗೆದುಕೊಳ್ಳದೆ ನಿಮ್ಮ ಯೋಚನೆಯಂತೆ ಮತ್ತೊಬ್ಬನ ಹೆಸರಿನಲ್ಲಿ ಸ್ವೀಕರಿಸಿದರೂ ಅವರ ಹತ್ತಿರವಿದ್ದ ಹಣವೆಷ್ಟು, ಈಗ ಎಷ್ಟಿರು ವುದು, ಎಂಬೀ ಯೋಚನೆಗೆ ಮನಸ್ಸು ಸಿಲುಕುವುದಿಲ್ಲವೆ? ನೀವೇ ಯೋಚಿಸಿ. ನಿಮ್ಮ ಈ ಏರ್ಪಾಟಿಗೆ ನಾನು ಖಂಡಿತವಾಗಿಯೂ ಸಮ್ಮತಿಸ ಲಾರೆ, ಬೇಡ" ವೆಂದು ದೃಢವಾಗಿ ಹೇಳಿಬಿಟ್ಟರು.

ಆದರೂ ಧನವಂತ ಬಿಡಲಿಲ್ಲ. "ತಮಗೆ ಯಾವ ಆಸೆಯೂ ಇಲ್ಲ ವೆಂಬುದು ನಿಶ್ಚಯ. ತಮ್ಮ ಮನಸ್ಸು ನೀರಿನಲ್ಲಿ ತೇಲುವ ಎಣ್ಣೆಯಹಾಗೆ; ಧೀರ ಹಣವನ್ನು ಕಂಡು ಭಯಪಡಬಹುದೆ? ಕಾಮಿನಿ ಕಾಂಚನ ಸಮುದ್ರ ದೋಪಾದಿಯಲ್ಲಿ ಸುತ್ತುವರಿದರೂ ಶುದ್ಧಾತ್ಮನ ಮನಸ್ಸು ಅದರಲ್ಲಿ ಬೆರೆಯದೆ ನೀರಿನಲ್ಲಿನ ಎಣ್ಣೆಯಹಾಗೆ ತೇಲುವುದೆಂದು ತಾವೇ ಹೇಳಿರುವಿರಲ್ಲಾ!" ಎಂದನು.

"ನಿಜ. ಮೋಹವನ್ನು ತ್ಯಜಿಸಿದ ಮನಸ್ಸು ಎಣ್ಣೆಯಂತೆಯೇ ಪ್ರತ್ಯೇಕವಾಗಿ ನಿಲ್ಲಬಹುದು. ಆದರೆ ದೀರ್ಘಕಾಲ ನೀರಿನಲ್ಲಿ ಎಣ್ಣೆಯನ್ನು ಸೇರಿಸಿಟ್ಟರೆ ಎಷ್ಟೇ ಶುದ್ಧವಾದ ಎಣ್ಣೆಯಾದರೂ ಕೆಟ್ಟು ಹೊಲಸಾಗುವು ದೆಂಬ ವಿಷಯವು ನಿಮಗೆ ಗೊತ್ತಿಲ್ಲವೆ?" ಎಂದು ರಾಮಕೃಷ್ಣರು ನಗುತ್ತಾ ಉತ್ತರವಿತ್ತರು.

* * * *

ಶುದ್ಧ ಮನಸ್ಸಿಗೆ ಶಕ್ತಿಯಿರುವುದೇನೋ ನಿಜ. ಅದು ಅಪಾಯ ದಿಂದ ಪಾರಾಗಿ ತನ್ನನ್ನು ರಕ್ಷಿಸಿಕೊಳ್ಳಬಹುದು. ಬಲೆಗೆ ಬೀಳುವುದಿಲ್ಲ. ಆದರೂ, ಯಾರೇ ಆಗಲಿ, ದೀರ್ಘಕಾಲ ವಿಷಪರೀಕ್ಷೆಯನ್ನು ಮಾಡ

ಬಾರದು. ಪೂರ್ಣ ವಿವೇಕಿಯ ಮನಸ್ಸೂ ಕೂಡ ಕೆಲವು ಸಮಯದಲ್ಲಿ ಕಳವಳಕ್ಕೆ ಸಿಕ್ಕುತ್ತದೆ. ಕಾಮವಸ್ತುಗಳನ್ನು ಬಿಟ್ಟು ದೂರ ಹೋಗುವುದೇ ಲೇಸು. ಹಾಗಲ್ಲದೆ ಮನಸ್ಸಿನ ಸ್ಥಿರತೆಯನ್ನು ಪರೀಕ್ಷಿಸಿ ನೋಡೋಣವೆಂದು ಒಬ್ಬನು ಸ್ವಲ್ಪ ಸ್ವಲ್ಪ ಹತ್ತಿರ ಹೋಗಿ ಅಪಾಯದೆಡೆಯಲ್ಲಿಯೇ ನಿಂತರೆ ನಿಶ್ಚಯವಾಗಿಯೂ ಆತ ಕೆಡುವನು.

೪

## ಚಿತ್ತಶುದ್ಧಿ

ಸೌಂದರ್ಯವತಿಯಾದ ಸ್ತ್ರೀಯನ್ನು ನೋಡಿದೊಡನೆಯೇ ಜಗನ್ಮಾತೆಯನ್ನು ಧ್ಯಾನಿಸಬೇಕು. ಎದುರು ಕಾಣುವ ಸ್ತ್ರೀ, ದೇವಿಯ ಅನೇಕ ರೂಪಗಳಲ್ಲೊಂದು ಎಂಬುದನ್ನು ನೆನಪಿನಲ್ಲಿಟ್ಟು, "ಈಕೆ ದೇವಿಯ ಅವತಾರ, ಲೋಕಮಾತೆ ಸೌಂದರ್ಯ-ಸ್ವರೂಪಳಲ್ಲವೆ? ಪ್ರೇಮಪಾತ್ರಳಾದ ನನ್ನ ಪ್ರಿಯಮಾತೆ ಮಹಾದೇವಿ ನನಗೆ ದರ್ಶನವನ್ನು ನೀಡುವಳು" ಎಂದು ಭಾವಿಸಿ, ಎದುರಿಗೆ ನಿಂತಿರುವ ತಾಯನ್ನು ನಮಸ್ಕರಿಸಬೇಕು. ಮನಸ್ಸಿನಲ್ಲಿ ಶಿಶುಭಾವದ ಸರಳತೆಯನ್ನು ಇಟ್ಟಿರಬೇಕು. ತಾಯನ್ನು ನೋಡುವಾಗ ಬೇರೆ ಯೋಚನೆಗೆ ಜಾಗವೆಲ್ಲಿರುವುದು. ಈ ಉಪಾಯವನ್ನೇ ಶ್ರೀರಾಮಕೃಷ್ಣರು ಮೊದಲಿನಿಂದಲೂ ಕೈಗೊಂಡರು. ವಿವೇಕವನ್ನೂ ವಿದ್ಯೆಯನ್ನೂ ಪಡೆದವರು ಕೂಡ ಕಾಮದ ಶಕ್ತಿಗೆ ಸಿಕ್ಕಿ ಕೆಡುತ್ತಾರೆ. ಈ ಅಪಾಯದಿಂದ ರಕ್ಷಿಸಿಕೊಳ್ಳಲು ಭಗವಾನ್ ಶ್ರೀರಾಮಕೃಷ್ಣರು ಉಪದೇಶಿಸಿರುವ ಈ ಉಪಾಯ ಬಹಳ ಶ್ರೇಷ್ಠ.

ಸ್ತ್ರೀ ಸ್ವರೂಪವನ್ನು ದ್ವೇಷಿಸಬಾರದು. ಸ್ತ್ರೀಯರನ್ನು ಕುರಿತು ಕೀಳಾಗಿ ಮಾತನಾಡಬಾರದು. ವಂಚಕ ಸ್ವರೂಪಿಣಿಯರೆಂದು ಸ್ತ್ರೀಯರನ್ನು ಅಲ್ಲಗಳೆಯುವುದು ತಪ್ಪು. ತಾಯನ್ನು ದ್ವೇಷಿಸಿ ಅಲ್ಲಗಳೆಯಬಹುದೆ? ಸ್ತ್ರೀ ಮಹಾಪವಿತ್ರಳಾದ ದೇವಿಯ ಅವತಾರ. ಅವಳು ನಿನಗೆ ತಾಯಿ, ಸಕಲರಿಗೂ ತಾಯಿ, ಆಕೆಯೇ ಮಹಾಶಕ್ತಿ, ಜಗಜ್ಜನನಿ. ಎಲ್ಲೆಲ್ಲಿಯೂ ವ್ಯಾಪಿಸಿರುವ ಪರವಸ್ತುವೇ ಸ್ತ್ರೀ ರೂಪಿನಲ್ಲಿ ಕಾಣಿಸಿಕೊಳ್ಳುತ್ತದೆ. ಆ ಸೌಂದರ್ಯವೂ, ಮಂದಹಾಸವೂ, ಜನನಿಯ ಹೃಯದಲ್ಲಿ ಶಿಶುವಿನ ಮೇಲಿರುವ ಸ್ವಾಭಾವಿಕ ಪ್ರೇಮದ ಕುರುಹು. ದೇವಿಯನ್ನು ನಮಸ್ಕರಿಸು, ಕಾಮ

ಮರೆಯಾಗುವುದು. ಭಗವಾನ್ ಶ್ರೀರಾಮಕೃಷ್ಣರು ಉಪದೇಶಿಸಿದ ಈ ಉಪಾಯವನ್ನು ಉಪಯೋಗಿಸಿ ನೋಡಿ; ಮನಶ್ಶುದ್ಧಿಯುಂಟಾಗುವುದನ್ನು ಕೂಡಲೆ ತಿಳಿಯುವಿರಿ.

ಮಡಕೆ ಸೌಟು ಸುಟ್ಟುಗ ಸಿದ್ಧವಾಗಿದ್ದರೂ ನಾವು ಎದ್ದು ಪ್ರಯತ್ನಪಟ್ಟು ಅಡಿಗೆ ಮಾಡಿದರಲ್ಲವೇ ಆಹಾರವಾಗುತ್ತದೆ? ಸಾಮಾನುಗಳ ಪಟ್ಟಿಯನ್ನು ಓದುತ್ತಾ ಸುಮ್ಮನೆ ಕುಳಿತಿದ್ದರೆ ಪದಾರ್ಥ ದೊರೆಯುವುದಿಲ್ಲ. ಸ್ವಪ್ರಯತ್ನವಿಲ್ಲದಿದ್ದರೆ ಉಪದೇಶದಿಂದೇನೂ ಪ್ರಯೋಜನವಾಗುವುದಿಲ್ಲ. ಭಕ್ತಿಮಾರ್ಗದಲ್ಲಿ ಮನಸ್ಸನ್ನು ಸ್ಥಿರಗೊಳಿಸಬೇಕು.

ರೂಪವತಿಯಾದ ಹೆಂಗಸನ್ನು ಕಂಡು ಮನಸ್ಸು ಚಂಚಲಗೊಂಡರೆ ಆ ಕ್ಷಣವೇ ಅಶೋಕವನದಲ್ಲಿ ಮರದ ಕೆಳಗೆ ಕುಳಿತು ತಪಸ್ಸಿನಲ್ಲಿದ್ದ ಸೀತಾದೇವಿಯನ್ನು ಧ್ಯಾನಿಸು. ರಾಕ್ಷಸರ ಪಕ್ಷವನ್ನು ಸೇರುವಿಯಾ, ಅಥವಾ ಆಂಜನೇಯನ ಕಾಲಿಗೆ ಬಿದ್ದು ನಿನ್ನ ಮನಸ್ಸಿನ ಕಲ್ಮಷವನ್ನೊಪ್ಪಿಕೊಂಡು ತಾಯಿ ಸೀತೆಯ ಕೃಪೆಯನ್ನು ಬೇಡುವಿಯಾ? ದೇವಿ ಸ್ತ್ರೀ ರೂಪದಲ್ಲಿ ನಿಂತು ನಿನ್ನ ಭಕ್ತಿಯನ್ನವನ್ನು ಕೇಳುತ್ತಾಳೆ! ಮೂರ್ಖನಂತೆ ನಿನ್ನ ಕಾಮದ ಯೋಚನೆಗಳಲ್ಲಿ ಮುಳುಗಬೇಡ. ಸುಳ್ಳನ್ನು ಸತ್ಯವೆಂದು ಭಾವಿಸಿ ಮಾರ್ಗವನ್ನು ಹುಡುಕಬೇಡ.

ಒಳ್ಳೆಯದಕ್ಕೂ ಕೆಟ್ಟದ್ದಕ್ಕೂ ಮೂಲಸ್ಥಾನ ನಮ್ಮ ಮನಸ್ಸಿನಲ್ಲಿಯೇ ಇರುವುದು. ಅಲ್ಲಿ ಉದಯಿಸುವ ಯೋಚನೆಗಳೇ ಕಾರ್ಯರೂಪದಲ್ಲಿ ಹೊರಬರುತ್ತವೆ. ಬಾಹ್ಯ ಕಾರ್ಯಗಳೇ ಮುಖ್ಯ, ಅಂತರಾಳದಲ್ಲಿರುವುದು ಯಾರಿಗೂ ಗೋಚರಿಸುವುದಿಲ್ಲವೆಂದು ಮನಸ್ಸನ್ನು ಬರಬರುತ್ತ ಹೊಲಸು ತುಂಬಿದ ಕೊಳವಾಗುವಂತೆ ಮಾಡಬೇಡ. ಹಾಗೆ ಮಾಡಿದರೆ ಜೀವನದಲ್ಲಿ ನಾವು ಮಾಡುವ ಕೆಲಸಕಾರ್ಯಗಳಷ್ಟೂ ತಿದ್ದಲಾರದ ರೀತಿಯಲ್ಲಿ ಕೆಟ್ಟುಹೋಗುವುವು. ಕುಡಿಯುವ ನೀರಿನ ಭಾವಿಯಲ್ಲಿ ಕೊಳೆ ಸೇರುವಂತೆ ಬಿಟ್ಟರೆ ಊರಿನ ಆರೋಗ್ಯ ಸ್ಥಿತಿ ಹೇಗೆ ಕೆಡುವುದೊ ಅಷ್ಟೆ ಸತ್ಯ ಮೇಲೆ ಹೇಳಿರುವುದು.

* * * *

ಸ್ನೇಹಿತರಿಬ್ಬರು ವಿರಾಮವಾಗಿ ದಾರಿ ನಡೆಯುತ್ತಿದ್ದಾಗ ಒಂದು ಮನೆಯಲ್ಲಿ ಯಾರೋ ಪುರಾಣವನ್ನೋದುತ್ತಿದ್ದುದನ್ನೂ ಅದನ್ನು ಜನರು ಗುಂಪು ಸೇರಿ ಕೇಳುತ್ತಿದ್ದುದನ್ನೂ ನೋಡಿದರು.

"ಬಾರೋ, ನಾವೂ ಹೋಗಿ ಕೇಳೋಣ" ಎಂದು ರಾಮಪ್ಪ ಸ್ನೇಹಿತನನ್ನು ಕರೆದನು. ಅದಕ್ಕೆ ತಿಮ್ಮಪ್ಪ

"ಹರಿಕಥೆ ಕಾಲಕ್ಷೇಪಗಳೆಂದರೇ ನನಗೆ ಇಷ್ಟವಾಗುವುದಿಲ್ಲ. ಅಳುತ್ತಾ ನಗುತ್ತಾ ಎಂದೂ ನಡೆಯದ ಕಥೆಗಳನ್ನು ಹೇಳಿಕೊಂಡು ಕಾಲವನ್ನು ಕಳೆಯುತ್ತಾರೆ. ಅಗೋ, ಆ ಸೂಳೆಯ ಬೀದಿಗೆ ಹೋಗೋಣ, ಬಾ! ಅಲ್ಲಿ ಉಲ್ಲಾಸದಿಂದ ಈ ಹೊತ್ತನ್ನು ಕಳೆಯುವೆವು. ನಮ್ಮ ಕಷ್ಟಗಳಂತೂ ಇದ್ದೇ ಇವೆ; ಒಂದು ಹೊತ್ತಾದರೂ ತಮಾಷೆಯಾಗಿ ಕಾಲ ಕಳೆಯಬಹುದಲ್ಲವೆ?" ಎಂದನು.

ರಾಮಪ್ಪ ಇದಕ್ಕೊಪ್ಪಲಿಲ್ಲ. "ನನಗೆ ಅದು ಬೇಡಪ್ಪಾ! ನೀನು ಬೇಕಾದರೆ ಹೋಗು. ನಾನು ಇಲ್ಲಿಯೇ ನಿಂತು ಹರಿಕಥೆಯನ್ನು ಕೇಳುತ್ತೇನೆ" ಎಂದವನು ಹೇಳಿದ. ಮಿತ್ರರಿಬ್ಬರೂ ಅವರವರ ದಾರಿ ಹಿಡಿದರು. ತಿಮ್ಮಪ್ಪ ಸೂಳೆಯ ಬೀದಿಗೆ ಹೋದ. ರಾಮಪ್ಪ ಆ ಮನೆಯ ಜಗುಲಿಯನ್ನು ಸೇರಿ ಹರಿಕಥೆಯನ್ನು ಕೇಳಲು ಅನುವಾದ.

ಸೂಳೆಯ ಮನೆಯನ್ನು ಸೇರಿದ ತಿಮ್ಮಪ್ಪನಿಗೆ ಏಕೋ ಮನಸ್ಸಿಗೆ ಸಂತೋಷವಾಗಲಿಲ್ಲ. "ಇಲ್ಲಿ ಏಕಾದರೂ ಬಂದೆನೊ! ಹರಿಕಥೆಯನ್ನೇ ನಾನೂ ಕೇಳಲು ಹೋಗಿದ್ದರೆ ಚೆನ್ನಾಗಿರುತ್ತಿತ್ತಲ್ಲಾ!" ಎಂದೆಣಿಸಿ ಕಾತುರಪಟ್ಟನು. ಅಲ್ಲಿ ನಾಲ್ಕಾರು ಜನರು ಸೇರಿ ಇಸ್ಪೀಟಾಟವನ್ನು ಆಡುತ್ತಾ ತಮಾಷೆಯಾಗಿ ಮಾತಾಡುತ್ತಿದ್ದರು. ಈತನೂ ಅವರ ಜತೆಗೆ ಕುಳಿತನು. ಆದರೆ ಇವನ ಮನಸ್ಸು ಅಲ್ಲಿರಲಿಲ್ಲ. ಜಗುಲಿಯ ಮೇಲೆ ಕುಳಿತು ಹರಿಕಥೆಯನ್ನು ಕೇಳುತ್ತಿದ್ದ ಭಾಗವತ ಭಕ್ತರ ಗುಂಪನ್ನು ಸೇರಿತ್ತು.

ರಾಮಪ್ಪ ಕಾಲಕ್ಷೇಪವನ್ನು ಕೇಳುತ್ತಿದ್ದರೂ ಮನಸ್ಸು ಕಥೆಯಲ್ಲಿ ನಿಲ್ಲದೆ ಹೋಯಿತು. ಭಾಗವತರ ಹಾಡು ಚೆನ್ನಾಗಿಲ್ಲವೆಂದೂ ಅವರ ಗಂಟಲು ಕಟ್ಟಿದೆಯೆಂದೂ ಯೋಚಿಸುತ್ತಿದ್ದನೇ ಹೊರತು, ಕಥೆಯಲ್ಲಿ ಅವನಿಗೆ ಸ್ವಾರಸ್ಯವುಂಟಾಗಲಿಲ್ಲ.

"ತಿಮ್ಮಪ್ಪ ಈಗೇನು ಮಾಡುತ್ತಿದ್ದಾನೊ! ಎಷ್ಟು ಸಂತೋಷವಾಗಿ ಕಾಲ ಕಳೆಯುತ್ತಿದ್ದಾನೊ! ನಾನೂ ಅವನ ಜತೆಯಲ್ಲಿಯೆ ಹೋಗಿದ್ದರೆ ಚೆನ್ನಾಗಿತ್ತಲ್ಲಾ!" ಎಂಬ ಯೋಚನಾತರಂಗದಲ್ಲಿ ತೇಲುತ್ತಿದ್ದನು. ತಿಮ್ಮಪ್ಪನ ಸಂತೋಷವನ್ನೂ, ಅವನು ಹೋದ ಸ್ಥಳ, ಅಲ್ಲಿಯ ಸ್ನೇಹಿತರು

ಮತ್ತು ಸೂಳೆಯರನ್ನೂ ಮನಸ್ಸಿನಲ್ಲೇ ವಿಧವಿಧವಾಗಿ ಚಿತ್ರಿಸಿ ನೋಡು ತ್ತಿದ್ದನು. ಭಾಗವತರ ಕಥೆಯನ್ನು ಕೇಳದೆ ಅವನ ಮನಸ್ಸೆಲ್ಲಾ ಸೂಳೆಯ ಮನೆಯಲ್ಲಿಯೇ ಇದ್ದಿತು.

ಇತ್ತ ತಿಮ್ಮಪ್ಪನಾದರೊ ತಾನಿದ್ದ ಸ್ಥಳವನ್ನೂ ಸುತ್ತಲೂ ಇದ್ದವ ರನ್ನೂ ಮರೆತು ಜಗುಲಿಯ ಮೇಲೆ ಕುಳಿತು ಕಾಲಕ್ಷೇಪವನ್ನು ಕೇಳುತ್ತಿದ್ದ ರಾಮಪ್ಪನನ್ನು ಕುರಿತೇ ಚಿಂತಿಸುತ್ತಿದ್ದನು. "ರಾಮಪ್ಪ ಎಷ್ಟೊಂದು ಆನಂದಭರಿತನಾಗಿ ಕಥೆಯನ್ನು ಕೇಳುತ್ತಿರುವನೊ! ಎಷ್ಟೊಂದು ಪುಣ್ಯ ವನ್ನು ಗಳಿಸಿದ್ದಾನೊ! ನಾನು ಇಲ್ಲಿ ಮೂರ್ಖರ ಮಧ್ಯೆ ಸೇರಿಕೊಂಡಿದ್ದೇ ನಲ್ಲಾ!" ಎಂದು ಹಂಬಲಿಸುತ್ತಲೇ ಕಾಲವನ್ನು ಕಳೆದನು.

ಕಡೆಗೇನಾಯಿತು ಗೊತ್ತೆ? ರಾಮಪ್ಪ ಭಕ್ತರ ಜತೆಗೆ ಕಥೆಯನ್ನು ಕೇಳುತ್ತಿದ್ದರೂ, ಸೂಳೆಯ ಮನೆಗೆ ಹೋದ ಪಾಪವನ್ನು ಅನುಭವಿಸಬೇಕಾ ಯಿತು. ತಿಮ್ಮಪ್ಪ ಸೂಳೆಯ ಮನೆಯಲ್ಲಿ ಕಾಲಕಳೆದರೂ ಕಾಲಕ್ಷೇಪವನ್ನು ಕೇಳಿದ ಪುಣ್ಯವನ್ನು ಗಳಿಸಿದನು.

೫

## ಭಕ್ತಿಮಾರ್ಗ

"ನಿನ್ನ ಎದುರಿಗೆ ನಾನು ನಿಂತಿದ್ದೇನೆ ಅಲ್ಲವೆ? ಆದರೆ ನನ್ನ ಮುಖಕ್ಕೆ ನೇರವಾಗಿ ಒಂದು ಬಟ್ಟೆಯನ್ನು ಹಿಡಿದುಕೊಂಡರೆ ನಿನಗೆ ನಾನು ಕಾಣಿಸುವುದಿಲ್ಲ. ಆ ಕ್ಷಣವೆ ನಾನು ಮರೆಯಾಗುತ್ತೇನೆ. ನಾನಿದ್ದ ಜಾಗದಲ್ಲಿಯೇ—ನಿನ್ನ ಪಕ್ಕದಲ್ಲಿಯೇ—ಇರುವೆನು. ಆದರೂ ಬಟ್ಟೆಯ ಹಿಂದೆ ನಾನು ಮರೆಯಾಗಿ ನಿನ್ನ ಕಣ್ಣಿಗೆ ಕಾಣಿಸದೆ ಹೋಗುತ್ತೇನೆ. ಹೀಗೆಯೆ ಈಶ್ವರನೂ ಕೂಡ ನಿನಗೂ ನನಗೂ ಸಕಲರಿಗೂ ಅತ್ಯಂತ ಸಮೀಪದಲ್ಲಿಯೆ ಇರುವನು; ಇತರ ಎಲ್ಲಾ ವಸ್ತುಗಳಿಗಿಂತಲೂ ಹೆಚ್ಚಿನ ಹತ್ತಿರದಲ್ಲೆ ಯಾವಾಗಲೂ ಇರುವನು. ಆದರೆ ನಾನು ಎಂಬ ತೆರೆ ಅವ ನನ್ನು ಮರೆಮಾಡುತ್ತದೆ. ನಿನ್ನ ಕಣ್ಣುಗಳನ್ನು ಚಿಕ್ಕದೊಂದು ಬಟ್ಟೆಯಿಂದ ಮುಚ್ಚಿದರೂ ಕೂಡ ದೊಡ್ಡ ಪರ್ವತವೂ ಕಾಣಿಸದೆ ಹೋಗುತ್ತದೆ. ಅಹಂಕಾರ, ಮಮತೆ ಯೆಂದು ಹೇಳಲ್ಪಡುವ ಈ ತೆರೆಯನ್ನು ಬಿಡದೆ ನಾವು ಹಿಡಿದುಕೊಂಡಿರುವವರೆಗೂ ದೇವರನ್ನು ನೋಡುವುದಕ್ಕಾಗುವುದಿಲ್ಲ.

"ನಾನು" ಎಂಬ ಭಾವ ಬಿಟ್ಟು ಹೋದ ತಕ್ಷಣವೆ ದೇವರ ನಿಜಸ್ವರೂಪ ಸ್ಪಷ್ಟವಾಗಿ ಕಾಣಿಸುವುದು."

"ಇದಕ್ಕೆ ಭಗವಂತನ ಕೃಪೆಬೇಕು. ಈ ಕೃಪೆ ಯಾವನ ಮೇಲೆ ಬೀಸುವುದೊ ಆತ, ತಾನು ಮಾಡುವುದೆಲ್ಲಾ ಈಶ್ವರೇಚ್ಛೆಯಿಂದ, ಸಕಲವೂ ಆತನ ಲೀಲೆ ಎಂದು ತಿಳಿಯುವನು. ಈ ಜ್ಞಾನ ಆತನಿಗುಂಟಾದೊಡನೆಯೆ ಅವನು ಜೀವನ್ಮುಕ್ತನಾಗುತ್ತಾನೆ,—ಅಂದರೆ, ದೇಹದಲ್ಲಿರುವಾಗಲೇ ಮುಕ್ತಿಯನ್ನು ಪಡೆಯುತ್ತಾನೆ. ಆತನಿಗೆ ಭಯವೆಂಬುದೇ ಇರುವುದಿಲ್ಲ; ದುಃಖವೂ ಉಂಟಾಗುವುದಿಲ್ಲ."

ದೇವರಲ್ಲಿ ತಲ್ಲೀನನಾದ ಭಕ್ತ ಆಗಾಗ್ಗೆ ತನಗೆ ತಾನೇ ಜ್ಞಾಪಕ ಪಡಿಸಿಕೊಳ್ಳುತ್ತಾನೆ. "ಒಡಯನೇ ನೀನೇ ಸಕಲ ಕಾರ್ಯಗಳಿಗೂ ಕರ್ತ. ನಾನು ಏನೂ ಮಾಡುವುದಿಲ್ಲ, ಕೀಲುಬೊಂಬೆಯಂತೆ ಚಲಿಸುತ್ತೇನೆ. ನೀನು ನನ್ನ ಮೂಲಕ ಕೆಲಸ ಮಾಡಿಸುತ್ತೀಯೆ ಎಲ್ಲವೂ ನಿನ್ನ ಮಹಿಮೆಯಿಂದಲ್ಲದೆ ಬೇರಲ್ಲ. ನಾನು ಯಾವ ಕೆಲಸ ಚೆನ್ನಾಗಿ ಮಾಡಿದ್ದರೆ ಅದು ನಿನ್ನ ಪ್ರಭೆಯಿಂದಲ್ಲದೆ ಮತ್ತೇನು? ಈ ಮನೆ, ಕುಟುಂಬ ನನ್ನದಲ್ಲ, ಇವೆಲ್ಲಾ ನಿನ್ನವು. ನಿನ್ನಿಚ್ಛೆಯಂತೆ ಕೆಲಸಮಾಡುವ ಆಳು ನಾನು. ನಿನ್ನ ಆಣತಿಯಂತೆ ಕೆಲಸ ಮಾಡುವುದೆ ನನ್ನ ಬಾಳಿನ ಕರ್ತವ್ಯ. ಅದೇ ನನಗೆ ಸಂತೋಷ."

ಹೀಗೆಯೇ ನಾವು ಆಗಿಂದಾಗ್ಗೆ ಈ ವಿಷಯವನ್ನು ಸ್ಮರಣೆಗೆ ತಂದುಕೊಂಡು ನಿಜವಾದ ಭಕ್ತಿಯಿಂದ ಬಾಳಿದರೆ "ನಾನು" ಎಂಬ ತೆರೆ ಬಿದ್ದುಹೋಗಿ ಸತ್ಯಸಾಕ್ಷಾತ್ಕಾರವಾಗುವುದು.

"ನಾನು" ಎಂಬುದು ಎರಡು ವಿಧವಾಗಿದೆ. ಒಂದು ಪಕ್ವವಾದ ಭಕ್ತಿಯೊಡನೆ ಬೆರೆತ "ನಾನು" ಎಂಬ ಭಾವನೆ. ಮತ್ತೊಂದು ಕ್ಷುದ್ರ ನಾದ ಮಮತೆ. ಇದೇ ದೇವರನ್ನು ಮರೆಸುವ ತೆರೆ.

ಭಕ್ತಿಯಲ್ಲಿಯೇ ನೆಲಸಿದ ಸಾಧಕ, "ಭಗವಂತನಿಚ್ಛೆಯಂತೆ ಸೇವೆಯನ್ನು ಮಾಡುವವನು ನಾನು. ಇಡೀ ಜಗತ್ತೇ ಆತನ ಸೊತ್ತು, ಆತನ ಹಕ್ಕು, ಆತನ ಪ್ರಭೆ, ನಾನು ಆತನ ಸೇವಕ; ಆತನ ಕಟ್ಟಳೆಯನ್ನು ನೆರವೇರಿಸುವುದೆ ನನ್ನ ಸಂತೋಷ" ವೆಂಬುದಾಗಿ ಜೀವನವನ್ನು ನಡೆಸುತ್ತಾನೆ. ಅಂತಹ ಬಾಳಿನ ಫಲವಾಗಿ ಅಹಂಕಾರ ಪಕ್ವವಾದ ಹಣ್ಣಿನಂತಾಗಿ. ಕಡೆಗೆ ಅದು ಬಿದ್ದುಹೋಗುವುದು. ಭಕ್ತ ಜೀವನ್ಮುಕ್ತನಾಗುವನು.

"ನಾನು" ಎಂಬ ಭಾವನೆಯನ್ನು ಅಷ್ಟು ಸುಲಭವಾಗಿ ಬಿಡುವು

ದಕ್ಕಾಗುವುದಿಲ್ಲ. ಅರಿವೂ ಅದ್ವೈತಶಾಸ್ತ್ರ ವಿದ್ಯೆಯೂ ಇದ್ದರೆ ಮಾತ್ರ ಸಾಲದು. ತಾನು ಈಶ್ವರನ ಸೇವಕನೆಂಬ ಭಾವನೆ ದೇಹದಾದ್ಯಂತವೂ ವ್ಯಾಪಿಸಬೇಕು. ಮನಸ್ಸು ಈ ಭಕ್ತಿಭಾವನೆಯಲ್ಲಿ ಸ್ಥಿರವಾಗಬೇಕು. ಭಕ್ತನ ಈ "ನಾನು" ವಿನಲ್ಲಿ ದೋಷವಿಲ್ಲ. ಶಿಶುವಿನ "ನಾನು" ಭಾವನೆಯಂತೆ ಇದೂ ನಿಷ್ಕಲಂಕವಾದುದು. ಬಲಿಯದ ಅಹಂಕಾರವನ್ನು ಬಿಡಬೇಕು. ಭಕ್ತನ "ನಾನು" ಅವನನ್ನು ಈಶ್ವರನೆಡೆಗೆ ಒಯ್ಯುವುದು. ಏಕೆಂದರೆ ಈ ಮಮತೆ ತಾನು ಭಗವಂತನ ಸೇವಕನೆಂಬ ಭಾವನೆಯ ಎಲ್ಲೆಯನ್ನು ಮೀರುವುದಿಲ್ಲ. ಇದು ನಿರ್ದೋಷವಾದುದು. ಭಕ್ತಿಮಾರ್ಗವೇ ಶ್ರೇಷ್ಠಮಾರ್ಗ.

ಬೆಳ್ಳುಳ್ಳಿಯನ್ನಿಟ್ಟಿದ್ದ ಪಾತ್ರೆಯನ್ನು ಎಷ್ಟೇ ಚೆನ್ನಾಗಿ ತೊಳೆದರೂ ಬೆಳ್ಳುಳ್ಳಿಯ ವಾಸನೆ ಇದ್ದೇ ಇರುತ್ತದೆ. ಹಾಗೆಯೇ ಅಹಂಕಾರವೂ ಕೂಡ ಅದನ್ನು ವಾಸನೆಯಿಲ್ಲದೆ ತೊಳೆಯುವುದು ಬಹಳ ಶ್ರಮಸಾಧ್ಯ. ಸಾಧಾರಣ ಜನರು ಒಂದು ವೇಳೆ ತಮ್ಮ ಅಹಂಕಾರವನ್ನು ನೀಗಿಕೊಳ್ಳಬಹುದು. ಆದರೆ ಸನ್ಯಾಸಿಯ ಪಾಡು ಬಹಳ ಕಷ್ಟ. "ನಾನು" ಭಾವನೆಯನ್ನು ಭಕ್ತಿಮಾರ್ಗದಲ್ಲಿ ಐಕ್ಯಗೊಳಿಸಿ ಮೆಲ್ಲ ಮೆಲ್ಲನೆ ತಿದ್ದುತ್ತಾ ಹೋದರೆ ಕ್ರಮವಾಗಿ "ನಾನು" ಎಂಬುದು ಪಕ್ವನಾಗಿ ಮಾಗಿ ಸಡಿಲವಾಗಿ ಬಿದ್ದುಹೋಗುತ್ತದೆ.

* * * *

ಘನವಿದ್ವಾಂಸನಾದ ಪ್ರಖ್ಯಾತ ವೈದ್ಯರೊಬ್ಬರು ಖಾಯಿಲೆಯಿದ್ದ ಮಗುವನ್ನು ನೋಡಿ ಪರೀಕ್ಷಿಸಿ, ಅದರ ತಾಯಿಗೆ ಹೇಳುತ್ತಾರೆ: "ಕಳವಳ ಪಡಬೇಡಿ. ಮಗುವಿನ ಪ್ರಾಣವನ್ನು ನಾನು ಉಳುಸುವೆನು." ಹೀಗೆ ಅವರು ಹೇಳುವಾಗ ದೇವರು ನಗುತ್ತಾನೆ ಎನ್ನುತ್ತಾರೆ ಪರಮಹಂಸರು. ಮನುಷ್ಯನ ಪ್ರಾಣಕ್ಕೆ ಕಾವಲುಗಾರನೂ ಯಜಮಾನನೂ ವೈದ್ಯನಲ್ಲ. ಅದು ಭಗವಂತನ ಶಕ್ತಿಗೆ ಒಳಪಟ್ಟಿರುವುದು.

ಅಣ್ಣ ತಮ್ಮಂದಿರಿಬ್ಬರು, ಒಂದಿಗಿರುವುದು ಇನ್ನು ಸಾಧ್ಯವಿಲ್ಲವೆಂದು ನಿಶ್ಚಯಿಸಿ ಆಸ್ತಿಯನ್ನು ಭಾಗಿಸಿಕೊಳ್ಳುವ ಏರ್ಪಾಡು ಮಾಡಲನುವಾದರು. ಹಗ್ಗವನ್ನು ತಂದು ಹೊಲಗದ್ದೆಗಳನ್ನು ಅಳತೆಮಾಡಿ "ಇದು ನಿನ್ನ ಭಾಗ, ಇದು ನನ್ನದು" ಎನ್ನುತ್ತಿದ್ದರು. ಆಗಲೂ ದೇವರು ನಗುತ್ತಾನೆಯಂತೆ. ನಶ್ವರನೂ ಪರಾಧೀನನೂ ಆದ ಜೀವ "ಇದು ನನ್ನದು" ಎಂದರೆ ದೇವರು ನಗುವುದಿಲ್ಲವೆ?

* * * *

ಅನೇಕ ವರುಷಗಳಿಗೆ ಹಿಂದೆ ಪಾಶ್ಚಾತ್ಯ ದೇಶದಲ್ಲಿ ಒಬ್ಬ ತರುಣ

ಕ್ರಿಶ್ಚಿಯನ್ನರ ಮಠವೊಂದನ್ನು ಸೇರಿ ಅಲ್ಲಿ ಇತರ ಸನ್ಯಾಸಿಗಳಿಗೆ ಅಡಿಗೆ ಮಾಡಿ ಬಡಿಸುವುದು, ಮತ್ತು ಇನ್ನೂ ಚಿಕ್ಕಪುಟ್ಟ ಕೆಲಸಗಳನ್ನೆಲ್ಲಾ ಮಾಡು ತ್ತಿದ್ದನು. ಇವನು ಹೆಚ್ಚು ವಿದ್ಯಾವಂತನಲ್ಲ. ವಯಸ್ಸಿನಲ್ಲಿಯೂ ಚಿಕ್ಕವನು. ಆದರೂ ಅತ್ಯಂತ ನಿರ್ಮಲ ಮನಸ್ಸಿನವನು, ದೊಡ್ಡ ಭಕ್ತ. ತಾನು ಮಾಡುತ್ತಿದ್ದ ಅಡಿಗೆ ಕೆಲಸ, ಬಟ್ಟೆ ಒಗೆಯುವುದು, ಪಾತ್ರೆ ತೊಳೆಯು ವುದು ಮುಂತಾದುವು ಭಗವಂತನ ಸೇವೆ ಎಂದು ಭಾವಿಸಿದ್ದನು. ಅವನ ಜಪಧ್ಯಾನಾದಿಗಳಿಗೆ ಗೊತ್ತಾದ ಕಾಲ ವೇಳೆಗಳಿರಲಿಲ್ಲ. ಎಲ್ಲಾ ಕಾಲ ದಲ್ಲಿಯೂ ಯಾವ ಕೆಲಸವನ್ನು ಮಾಡುತ್ತಿರುವಾಗಲೂ ತನ್ನ ಪಕ್ಕದಲ್ಲಿಯೇ ದೇವರಿದ್ದಾನೆಂದು ತಿಳಿದಿದ್ದನು. ದೇವರು ಅವನ ಎಡೆಬಿಡದ ಸಂಗಾತಿ ಯಾದನು. ಭಗವಂತನು ತನ್ನ ಜತೆಯಲ್ಲಿಯೇ ಯಾವಾಗಲೂ ಇರುತ್ತಲೂ ತನ್ನೊಂದಿಗೆ ಮಲಗುತ್ತಲೂ ಆಟವಾಡುತ್ತಲೂ ಇರುವಂತೆಯೇ ಅವನು ಭಾವಿಸಿದನು. ಅವನ ಭಕ್ತಿಯೂ ಎಲ್ಲೆಯಿಲ್ಲದ ಸ್ಥಿರವಾದ ಆನಂದವೂ ಮಠದಲ್ಲಿದ್ದ ಇತರ ಸನ್ಯಾಸಿಗಳಿಗೆ ಅತ್ಯಾಶ್ಚರ್ಯವಾಯಿತು. ಬ್ರದರ್ ಲಾರೆನ್ಸ್ (Brother Lawrence) ಎಂಬ ಹೆಸರುಗೊಂಡ ಈ ಸನ್ಯಾಸಿಯ ಚರಿತ್ರೆಯನ್ನು ಓದುವಾಗ ಬೃಂದಾವನದ ಗೋಪಿಯರ ಕಥೆಯೂ, ಭಗವಾನ್ ಶ್ರೀರಾಮಕೃಷ್ಣರ ಚರಿತ್ರೆಯೂ ಸ್ಮರಣೆಗೆ ಬರುವುವು. ಯಾವ ದೇಶದಲ್ಲಿ ಆಗಲೀ ಯಾವಕಾಲದಲ್ಲಿ ಆಗಲೀ ಕೆಲವು ಮಹಾತ್ಮರು ಜೀವನ್ಮುಕ್ತಿಯನ್ನು ಪಡೆದು ಭಗವಂತನ ಸಾನ್ನಿಧ್ಯವನ್ನು ನೇರವಾಗಿ ಅನು ಭವಿಸುತ್ತಾರೆ.

೬

## ಅರಸನೂ ಭಾಗವತರು

ಶಾಸ್ತ್ರಗಳನ್ನೂ ಪುರಾಣಗಳನ್ನೂ ಪಠಿಸಿದ್ದ ಬ್ರಾಹ್ಮಣನೊಬ್ಬನು ಒಬ್ಬ ರಾಜನ ಅರಮನೆಯಲ್ಲಿ ಪುರಾಣವನ್ನೋದಲು ಅನುಮತಿಯನ್ನು ಬೇಡಿದನು.

"ಮಹಾರಾಜರೇ! ಭಾಗವತ ಅತ್ಯಂತ ಶ್ರೇಷ್ಠವಾದ ಧರ್ಮಗ್ರಂಥ. ಅದನ್ನು ಒಳ್ಳೆಯ ವಿದ್ವಾಂಸನ ಸಹಾಯದಿಂದ ತಾವು ಪಠಿಸಬೇಕಾದುದು ಬಹಳ ಅವಶ್ಯಕ. ನನಗೆ ತಾವು ಅಪ್ಪಣೆಯನ್ನು ದಯಪಾಲಿಸಿದರೆ ನಾನೇ

ಓದಿ ಹೇಳುತ್ತೇನೆ. ನಾನು ಧರ್ಮ ಗ್ರಂಥಗಳನ್ನು ಚೆನ್ನಾಗಿ ಓದಿ ಕಲಿತ ಪಂಡಿತನೆಂಬುದು ಶಾಸ್ತ್ರಜ್ಞರಿಗೆಲ್ಲಾ ಗೊತ್ತಿರುವುದು. ಅರಮನೆಯಲ್ಲಿ ಭಾಗವತವನ್ನೋದಬೇಕೆಂಬ ಅಭಿಲಾಷೆ ನನಗಿರುವುದು. ವಿದ್ವಾಂಸರನ್ನು ಮರ್ಯಾದೆ ಮಾಡುವುದು ಅರಸರಿಗೆ ಉಚಿತ" ಎಂದು ಬ್ರಾಹ್ಮಣನು ಕೇಳಿಕೊಂಡನು.

ಅರಸನೋ ಬುದ್ಧಿವಂತ, ವ್ಯವಹಾರ ಜ್ಞಾನವುಳ್ಳವನು. ಹೀಗೆ ಯೋಚಿಸಿದನು: "ಇವರು ನಿಜವಾಗಿ ಭಾಗವತ ಪುರಾಣಗಳನ್ನೋದಿ ಅವುಗಳ ಗೂಢಾರ್ಥವನ್ನು ಗ್ರಹಿಸಿದ್ದರೆ ಧ್ಯಾನ ಜಪತಪಗಳಲ್ಲಿ ನಿರತರಾಗಿರುತ್ತಿದ್ದರು, ಹಣ ಕೀರ್ತಿಗಳಿಗಾಸೆಪಟ್ಟು ಅರಮನೆಗೆ ಬರುತ್ತಿರಲಿಲ್ಲ" ಎಂದು ಆಲೋಚಿಸಿ ಬ್ರಾಹ್ಮಣನನ್ನು ಕುರಿತು ಅರಸನೆಂದನು:

"ಪಂಡಿತರೇ! ತಮ್ಮಂತಹ ಗುರುವಿನ ಮೂಲಕ ಭಾಗವತವನ್ನು ಕಲಿಯಬೇಕೆಂದು ನನಗೂ ಆಸೆಯಿರುವುದು. ತಾವು ಭಾಗವತವನ್ನು ಒಂದೆರಡು ಸಲ ಪುನಃ ಓದಿ ತಿಳಿದುಕೊಂಡು ಬನ್ನಿ."

ಅರಸನ ಮಾತನ್ನು ಕೇಳಿ ಪಂಡಿತನಿಗೆ ಸ್ವಲ್ಪ ಕೋಪ ಬಂದಿತು. ಆದರೆ ಅರಸನ ಮುಂದೆ ಕೋಪವನ್ನು ಹೇಗೆ ತೋರಿಸುವುದು? ಮರು ಮಾತಾಡದೆ ಮನೆಗೆ ಹೋದನು.

"ಈ ಅರಸ ಕಡು ಮುಠ್ಠಾಳ. ಇವನಿಗೆ ಪಂಡಿತರಿಗೂ ಮೂರ್ಖರಿಗೂ ಇರುವ ವ್ಯತ್ಯಾಸ ಗೊತ್ತಾಗುವುದಿಲ್ಲ. ನನಗೇ 'ಭಾಗವತವನ್ನು ಚೆನ್ನಾಗಿ ಓದಿ' ಎಂದು ಹೇಳುತ್ತಾನೆ. ಹನ್ನೆರಡು ವರುಷ ಶಾಸ್ತ್ರ ವ್ಯಾಸಂಗದಲ್ಲಿಯೇ ಕಳೆದಿರುವೆ ನಾನು. ಭಾಗವತವೆಲ್ಲಾ ನನಗೆ ಕರತಲಾಮಲಕವಾಗಿದೆ. ಈ ರಾಜನಾದರೋ, ಇನ್ನೊಂದು ಸಲ ಓದಿ ಬಾ, ಎನ್ನುತ್ತಾನೆ," ಎಂದು ಮನಸ್ಸಿನಲ್ಲಿ ನೊಂದುಕೊಂಡು ಮನೆಗೆ ಹೋದನು.

ಹೆಂಡತಿಯೊಡನೆ ನಡೆದುದನ್ನೆಲ್ಲಾ ಹೇಳಿದ. ಆಕೆ ಸ್ವಲ್ಪ ಯೋಚಿಸಿ, ಹೀಗೆಂದಳು: "ಏನಾದರೂ ರಾಜನು ರಾಜನೇ. ಅವನು ಹೇಳಿದ ಹಾಗೆಯೇ ಇನ್ನೊಂದು ಸಲ ಭಾಗವತವನ್ನೋದಿದ ಬಳಿಕ ಅರಮನೆಗೆ ಹೋಗಿ 'ಸನ್ನಿಧಾನ ಆಜ್ಞಾಪಿಸಿದಂತೆಯೇ ಮಾಡಿ ಬಂದಿದ್ದೇನೆ' ಎಂದು ಹೇಳಿ. ಹೇಗಾದರೂ ಮಾಡಿ ರಾಜನನ್ನು ತೃಪ್ತಿಗೊಳಿಸಿ ನೀವು ಅರಮನೆಯ ಪೌರಾಣಿಕರಾಗಿ ಸೇರಿಕೊಂಡರೆ ನಮಗೆಷ್ಟೋ ಲಾಭ."

ಈ ಮಾತನ್ನು ಕೇಳಿ ಬ್ರಾಹ್ಮಣ ತನ್ನ ಕೋಪವನ್ನು ಬಿಟ್ಟು

ಹಾಗೆಯೇ ಮಾಡಿದನು. ನಿಧಾನವಾಗಿ ಭಾಗವತವನ್ನು ಇನ್ನೊಂದು ಸಲ ಓದಿ ಪಾರಾಯಣ ಮಾಡಿದನು. ಅನಂತರ ಒಂದು ಒಳ್ಳೆಯ ದಿವಸ ನೋಡಿ ಅರಮನೆಗೆ ಹೋದನು.

ಅರಸ ಆತನನ್ನು ಮರ್ಯಾದೆಯಿಂದ ಬರಮಾಡಿಕೊಂಡನು; ಮತ್ತು "ಓದಿಯಾಯಿತೆ?" ಎಂದು ಕೇಳಿದನು.

"ಮಹಾರಾಜನೇ! ಸನ್ನಿಧಾನದ ಅಪ್ಪಣೆಯ ಪ್ರಕಾರ ಪುರಾಣವನ್ನು ಹಲವಾರು ಸಲ ಪಠಿಸಿ ಬಂದಿದ್ದೇನೆ. ಭಾಗವತ ಪುಣ್ಯ ಗ್ರಂಥವನ್ನು ಕ್ರಮವಾಗಿ ಸನ್ನಿಧಾನದಲ್ಲಿ ವಿಸ್ತರಿಸಿ ಮಹಾರಾಜರ ಕೀರ್ತಿಯನ್ನೂ ಧರ್ಮವನ್ನೂ ಬೆಳಸಬೇಕೆಂಬುದೇ ನನ್ನ ಆಸೆ" ಎಂದು ವಿದ್ವಾಂಸ ಉತ್ತರ ಹೇಳಿದ.

ಅರಸ, "ಪಂಡಿತರೇ! ನಾನು ತಮ್ಮ ಶಿಷ್ಯನಾಗಿ ಭಾಗವತವನ್ನು ಕೇಳುವುದೇನೋ ನಿಶ್ಚಯ. ಆದರೆ ಮತ್ತೊಂದು ಸಲ ತಾವು ಭಾಗವತವನ್ನೋದಿ ಬನ್ನಿ" ಎಂದನು.

ಪುನಃ ನಿರಾಶೆ ಹೊಂದಿದ ಬ್ರಾಹ್ಮಣ ಮನೆಯನ್ನು ಸೇರಿ ಹೆಂಡತಿಯೊಡನೆ ಸಮಾಚಾರವನ್ನು ಹೇಳಿದನು. ಆಕೆ ಚೆನ್ನಾಗಿ ಯೋಚಿಸಿ, ಹೇಳಿದಳು.: "ಅರಸನ ಮಾತಲ್ಲೇನೋ ರಹಸ್ಯ ಅಡಗಿದೆಯೆಂಬುದು ನಿಶ್ಚಯ. ಹೇಗಿದ್ದರೂ ಸರಿ, ಇನ್ನೊಂದು ಸಲ ಓದಿಯೇ ಬಿಡಿ, ನೋಡೋಣ."

ಈ ಸಲ ಎಡಬಿಡದ ಶ್ರದ್ಧೆಯಿಂದ ಬ್ರಾಹ್ಮಣ ಭಾಗವತ ಪಾರಾಯಣವನ್ನು ಪುನಃ ಪ್ರಾರಂಭಿಸಿದನು. ಈ ಸಲವೂ ನಿರಾಶನಾಗಬಾರದೆಂದು ದೃಢಸಂಕಲ್ಪ ಮಾಡಿಕೊಂಡು, ಪ್ರತ್ಯೇಕವಾದ ಸ್ಥಳವೊಂದನ್ನೇರ್ಪಡಿಸಿಕೊಂಡು, ಅಲ್ಲಿ ರಾತ್ರಿಯೂ ಹಗಲೂ ಭಾಗವತ ಪಾರಾಯಣದಲ್ಲಿ ತಲ್ಲೀನನಾದ. ಈ ಶ್ರದ್ಧೆಯ ಫಲವಾಗಿ ತಾನು ಆ ಗ್ರಂಥದಲ್ಲಿ ಇದುವರೆವಿಗೂ ಕಾಣದ ಅನೇಕ ಹೊಸ ವಿಷಯಗಳನ್ನೂ ರಹಸ್ಯಾರ್ಥಗಳನ್ನೂ ಕಂಡ. ಕ್ರಮವಾಗಿ, ತನ್ನರಿವಿಲ್ಲದೆಯೇ ಪುರುಷೋತ್ತಮನ ಅವತಾರಮಹಿಮೆ ಆತನ ಮದಹೃದಯವನ್ನೆಲ್ಲಾ ಸೂರೆಗೊಂಡಿತು. ವೇಳೆ ವೇಳೆಗೆ ಊಟ ಮಾಡುವುದನ್ನೂ ಕೂಡ ಅವನು ಮರೆತನು. ಮನೆಗೆ ಹೋಗುವುದನ್ನೂ ಬಿಟ್ಟು ತಾನು ಮಾಡಿಕೊಂಡಿದ್ದ ಆಶ್ರಮದಲ್ಲಿಯೇ ಕಾಲಕಳೆಯುತ್ತಿದ್ದನು.

ಕೀರ್ತಿ, ಧನ, ಗೌರವಗಳೆಲ್ಲಾ ಅಲ್ಪ ವಸ್ತುಗಳೆಂದು ಈಗ ಆತನು

ನೆನಸಿದನು. ಬರಬರುತ್ತ ಭಾಗವತ ಪಾರಾಯಣವನ್ನೂ ಬಿಟ್ಟು ಧ್ಯಾನದಲ್ಲಿ ಮಗ್ನನಾದನು. ಅರಸನ ಮನೆಗೆ ಹೋಗುವ ಯೋಚನೆಯನ್ನೇ ಈಗವನು ತ್ಯಜಿಸಿಬಿಟ್ಟನು.

ಕುಟುಂಬದ ವಿಚಾರವನ್ನೇ ಮನಸ್ಸಿಗೆ ಹಚ್ಚಿಕೊಳ್ಳದೆ ಧ್ಯಾನಾಸಕ್ತನಾಗಿದ್ದ ಗಂಡನನ್ನು ನೋಡಿ ಹೆಂಡತಿ ಬಹಳ ವಿಚಾರಕ್ಕೊಳಗಾದಳು. ಯಾವುದನ್ನೊ ಪ್ರಾರಂಭಿಸಿ ಕಡೆಗೆ ವಿಪರೀತಕ್ಕೆ ಬಂದಿತಲ್ಲಾ, ಎಂದು ಆಕೆ ದುಃಖಪಟ್ಟು ಏನೂ ತೋಚದೆ ರಾಜನ ಬಳಿಗೆ ಹೋಗಿ ತನ್ನ ಕಷ್ಟವನ್ನು ಹೇಳಿಕೊಂಡಳು. ಅರಸ ವಿಚಾರವನ್ನೆಲ್ಲಾ ಕೇಳಿ ತಿಳಿದುಕೊಂಡನು. ಆತನಿಗೆ ಬಹಳ ಸಂತೋಷವುಂಟಾಯಿತು. ತಕ್ಷಣವೇ ಆತನು ಬ್ರಾಹ್ಮಣನನ್ನು ನೋಡಲು ಹೊರಟ.

ಬ್ರಾಹ್ಮಣನ ಆಶ್ರಮವನ್ನು ಸೇರಿ ಅರಸನು, ಪಂಡಿತನ ಮುಖ ಪೂರ್ಣ ಜ್ಞಾನ ತೇಜಸ್ಸುಗಳಿಂದ ಪ್ರಕಾಶಿಸುತ್ತಿದ್ದುದನ್ನು ನೋಡಿದನು. ಒಡನೆಯೇ ರಾಜನು ಬ್ರಾಹ್ಮಣನ ಕಾಲಿಗೆ ಬಿದ್ದು, "ತಾವು ದೇವರ ಅನುಗ್ರಹವನ್ನು ಪೂರ್ಣವಾಗಿ ಹೊಂದಿರುವಿರಿ. ಇಗೋ ತಮಗೆ ನಮಸ್ಕರಿಸುತ್ತೇನೆ, ನಾನು ಮಾಡಿದ ಅಪಚಾರವನ್ನು ಕ್ಷಮಿಸಬೇಕು" ಎಂದನು.

ವಿಚಾರ ಪಾಂಡಿತ್ಯ ಬೇರೆ; ಅದು ಭಕ್ತಿಯೊಡನೆ ಬೆರೆತು ನಿಜ ಜ್ಞಾನವಾಗಿ ಪರಿಣಮಿಸುವುದು ಬೇರೆ.

೭

## ಸ್ತ್ರೀತ್ವವೂ ಮಾತೃತ್ವವೂ

ಸ್ತ್ರೀ ಜನ್ಮವನ್ನು ತಾಳಿದ ಸಕಲರೂ ದೇವಿಯ ಅಂಶಗಳಲ್ಲದೆ ಬೇರಲ್ಲ, ಎಂಬ ವಿಷಯವನ್ನು ಭಗವಾನ್ ಶ್ರೀರಾಮಕೃಷ್ಣರು ಅಡಿಗಡಿಗೂ ಒತ್ತಿ ಹೇಳುತ್ತಿದ್ದರು.

"ದೇವಿಯು ತನ್ನನ್ನು ಅನೇಕ ಅಂಶಗಳಾಗಿ ಮಾಡಿಕೊಂಡಿರುವಳು. ಈ ಭಾಗವೇ ನಿನ್ನ ದೃಷ್ಟಿಗೆ ಸ್ತ್ರೀಯರಾಗಿ ಗೋಚರಿಸುವರು. ಆದುದರಿಂದ ಯಾವ ಸ್ತ್ರೀಯರನ್ನು ನೀನು ನೋಡಿದರೂ, 'ದೇವಿ ನನಗೆ ದರ್ಶನವೀಯುತ್ತಾಳೆ' ಎಂದು ತಿಳಿದು, ದೇವಿಯ ಗುಡಿಯೊಳಗೆ ಹೋಗುವಾಗ ಮನಸ್ಸು ಯಾವ ಭಾವನೆಯಲ್ಲಿರುತ್ತದೆಯೋ ಅದೇ ನೆಲೆಯಲ್ಲಿ ಮನಸ್ಸನ್ನು ನಿಲ್ಲಿಸ

ಬೇಕು. ಒಳ್ಳೆಯ ಸ್ತ್ರೀಯರಾದರೂ ಕೆಟ್ಟವರಾದರೂ ಅವರೆಲ್ಲಾ ನಿಜವಾಗಿಯೂ ದೇವಿಯ ಸ್ವರೂಪವೆಂದು ಅರಿತು ಗೌರವಿಸು. ಅವರನ್ನು ದೂಷಿಸುವುದಕ್ಕಾಗಲಿ ಭೂಷಿಸುವುದಕ್ಕಾಗಲಿ ನಿನಗೂ ನನಗೂ ಏನು ಬಾಧ್ಯತೆಯಿರುವುದು? ಜಗತ್ಕಾರಣಳಾದ ದೇವಿಯ ಲೀಲೆಯನ್ನು ನಾವು ಅರಿಯಲಳವೆ? ಸ್ತ್ರೀಯರನ್ನು ಗೌರವಿಸುವುದು ನಮ್ಮ ಕರ್ತವ್ಯ. ಅವರೆಲ್ಲರೂ ಜಗನ್ಮಾತೆಯ ಅವತಾರವೆಂದೇ ತಿಳಿಯಬೇಕು. ಗುಡಿಯಲ್ಲಿ ಅಲಂಕೃತವಾದ ಅಮ್ಮನವರ ವಿಗ್ರಹವನ್ನು ಆರಾಧಿಸಿ ನಮಸ್ಕರಿಸುವಂತೆಯೇ ಸಜೀವ ವಿಗ್ರಹಗಳಾದ ಈ ಮೂರ್ತಿಗಳಲ್ಲಿಯೂ ಅದೇ ಪೂಜ್ಯಭಾವವನ್ನಿಟ್ಟು ಗೌರವಿಸಬೇಕು.''

* * * *

"ಗುರೂಜಿ! ಸ್ತ್ರೀಯರೊಂದಿಗೆ ನಾವು ಹೇಗೆ ವರ್ತಿಸಬೇಕು?'' ಎಂದೊಬ್ಬ ಶಿಷ್ಯರು ಪರಮಹಂಸರನ್ನು ಕೇಳಿದರು.

"ದೇವರ ಕೃಪೆಯನ್ನು ಸಂಪಾದಿಸಿ ಆತನ ದರ್ಶನ ಭಾಗ್ಯವನ್ನು ಪಡೆದವನು ಸ್ತ್ರೀಯರನ್ನು ಕಂಡು ಭಯಪಡಬೇಕಾಗಿಲ್ಲ. ಏಕೆಂದರೆ ಅವನ ದೃಷ್ಟಿಗೆ ಬೀಳುವ ಸ್ತ್ರೀಯರೆಲ್ಲ ಲೋಕಮಾತೆಯ ಸಜೀವ ವಿಗ್ರಹದಂತೆ ಕಾಣುವರು. ವಿಶ್ವರೂಪಿಯಾದ ದೇವಿಯೇ ಅನೇಕ ಸ್ತ್ರೀ ಮೂರ್ತಿಯಾಗಿ ದರ್ಶನವನ್ನು ಕೊಡುತ್ತಾಳೆ, ಎಂದವನು ಎಲ್ಲರನ್ನೂ ಪೂಜಿಸುತ್ತಾನೆ. ಹೆತ್ತ ತಾಯನ್ನು ಪ್ರೀತಿ ಪೂರ್ವಕ ನಮಸ್ಕರಿಸುವಂತೆಯೇ ಸಕಲ ಹೆಂಗಸರನ್ನೂ ನಮಸ್ಕರಿಸುತ್ತಾನೆ.''

"ಗುರೂಜಿ! ಕಾಮವಿಕಾರವನ್ನು ಹೇಗೆ ಜಯಿಸುವುದು, ಅದನ್ನು ಕರುಣಿಸಬೇಕು.''

"ಅದನ್ನೇ ನಾನು ಹೇಳುತ್ತಿರುವುದು. ಯಾವ ಸ್ತ್ರೀಯನ್ನು ಕಂಡರೂ ಆಕೆಯನ್ನು ನಿನ್ನ ತಾಯೆಂದು ಭಾವಿಸು. ಅವಳ ಪಾದಗಳನ್ನೇ ನೋಡುತ್ತಾ ನಮಸ್ಕರಿಸು. ಆಗ ಕೆಟ್ಟ ಯೋಚನೆಗಳನ್ನೆಲ್ಲಾ ಹಾರಿ ಹೋಗುತ್ತವೆ.''

* * * *

ಗಂಡನ ಜೊತೆಯಲ್ಲಿದ್ದರೂ ಕನ್ನಿಕೆಯರಾಗಿಯೇ ಬಾಳುವ ಸ್ತ್ರೀಯರೂ ಇರುವರು. ಇವರೆಲ್ಲಾ ಈಶ್ವರಿಯ ಪೂರ್ಣ ಅವತಾರಗಳೆಂದೇ ಹೇಳಬೇಕು.

"ತಾಂತ್ರಿಕ ವಿಧಾನದಲ್ಲಿ ಸ್ತ್ರೀ ಭಕ್ತರ ಕೂಡ ಸೇರಿ ದೇವಿಯನ್ನು

ಕೆಲವರು ಪೂಜಿಸುತ್ತಾರಲ್ಲಾ, ಈ ವಿಷಯವಾಗಿ ತಮ್ಮ ಅಭಿಪ್ರಾಯ ವೇನು?" ಎಂದೊಬ್ಬ ಶಿಷ್ಯರು ಶ್ರೀರಾಮಕೃಷ್ಣರನ್ನು ಕೇಳಿದರು. ಬಂಗಾಳ ಮತ್ತು ಇತರ ಕೆಲವು ಪ್ರಾಂತ್ಯಗಳಲ್ಲಿ "ಶಾಕ್ತ" ಸಂಪ್ರದಾಯ ವನ್ನು ಕೆಲವರು ಆಚರಿಸುತ್ತಾರೆ. ಇವರಲ್ಲಿ ದುರ್ಮಾರ್ಗರೂ ಇರುವರು. ಇದನ್ನುದ್ದೇಶಿಸಿಯೇ ಶಿಷ್ಯರು ಈ ಪ್ರಶ್ನೆಯನ್ನು ಕೇಳಿದರು. ಅದಕ್ಕೆ ಶ್ರೀರಾಮಕೃಷ್ಣರು ಕೆಳಗೆ ಕಂಡಂತೆ ಉತ್ತರ ಕೊಟ್ಟರು.

"ಈ ಮಾರ್ಗದಲ್ಲಿ ಬಹಳ ಅಪಾಯವುಂಟು. ಸಾಧಾರಣ ಜನರು ಈ ಸಂಪ್ರದಾಯವನ್ನು ಆಚರಿಸಕೂಡದು. ಅತ್ಯಂತ ಕಠಿಣವಾದ ಈ ಮಾರ್ಗವನ್ನು ಕೈಗೊಂಡು ಪಾಪದಲ್ಲಿ ಬೀಳುವ ಸಂಭವವುಂಟು. ಸ್ತ್ರೀಯನ್ನೇ ಮಹಾಶಕ್ತಿಯೆಂದು ಭಾವಿಸಿ ಆಕೆಯನ್ನು ಪೂಜಿಸುವ ವಿಧಾನವನ್ನು ತಾಂತ್ರಿಕ ಶಾಸ್ತ್ರದಲ್ಲಿ ವಿವರಿಸಿದೆ. ಈ ಪೂಜೆಯನ್ನು ಮೂರು ವಿಧಗಳಲ್ಲಿ ಮಾಡಬಹುದು. ಭಕ್ತನು ತನ್ನನ್ನು ಮಗನೆಂದು ಭಾವಿಸುವುದು ಒಂದು ವಿಧಾನ. ತಾಯನ್ನು ಪ್ರೀತಿಸಲುಗೆಗಳಿಂದ ಹೇಗೆ ಪೂಜಿಸುವನೋ ಹಾಗೆಯೇ ಸ್ತ್ರೀಯನ್ನು ಪೂಜಿಸಿ ಆರಾಧಿಸುವ ಮಾರ್ಗವಿದು. ಮತ್ತೊಂದು ವಿಧಾನ, ಸಖೀ ಭಾವವನ್ನು ಕೈಗೊಂಡು, ತಾನು ಸ್ತ್ರೀಯ ಸ್ನೇಹಿತೆಯೆಂಬು ದಾಗಿ ಭಾವಿಸಿ ಆಕೆಯನ್ನು ಪೂಜಿಸುವುದು. ಇವೆರಡು ವಿಧಾನಗಳಲ್ಲಿ ಮೊದಲನೆಯದು,—ಅಂದರೆ ಮಗನಾಗಿ ನಿಂತು ಮನಸ್ಸನ್ನು ಆ ನೆಲೆಯಲ್ಲಿ ಪರವಶಗೊಳಿಸಿ ಹೆತ್ತ ತಾಯನ್ನು ಮಗು ಪ್ರೀತಿಸುವ ಹಾಗೆ ದೇವಿಯನ್ನು ಪೂಜಿಸುವುದು ಅತ್ಯುತ್ತಮವಾದುದು. ಸಖಿ—ಭಾವನೆಯೂ ಕೂಡ ಒಳ್ಳೆಯ ಮಾರ್ಗವೇ. ಮೂರನೆಯ ವಿಧಾನವೊಂದುಂಟು. ಇದೇ ಒಡೆಯ—ಒಡತಿಯ ಭಾವ. ಇದು ಬಹಳ ಅಪಾಯದಿಂದ ಕೂಡಿದ ಮಾರ್ಗ. ಇದನ್ನು ಕೈಗೊಳ್ಳಬಾರದು."

ವಿಗ್ರಹಾರಾಧನೆಯಂತೆಯೇ ಸಜೀವ ವಿಗ್ರಹವಾದ ಸ್ತ್ರೀಯನ್ನು ದೇವಿಯೆಂದು ಭಾವಿಸಿ ರಹಸ್ಯವಾಗಿ ಪೂಜಿಸುವ ವಿಧಾನವನ್ನು ತಾಂತ್ರಿಕ ಶಾಸ್ತ್ರದಲ್ಲಿ ವಿವರಿಸಿದೆ. ಇದನ್ನು ಪರಮಹಂಸರು ಬೇಡವೆನ್ನುತ್ತಾರೆ. ತಮ್ಮ ಸ್ವಂತ ಅನುಭವವನ್ನೂ ವರ್ಣಿಸುವರು: "ಎರಡು ವರ್ಷಗಳ ಕಾಲ ವನ್ನು ತಾಂತ್ರಿಕ ಸಾಧನೆಯಲ್ಲಿಯೇ ನಾನು ಕಳೆದಿದ್ದೇನೆ. ಸಖಿ ಭಾವನೆ, ಶಿಶು ಭಾವನೆ ಎಂಬ ಎರಡು ವಿಧಾನಗಳನ್ನೂ ಅಭ್ಯಾಸ ಮಾಡಿದೆ. ನನ್ನದು ಶಿಶು ಭಾವನೆಯ ಸ್ವಭಾವ. ಮೂರನೆಯ ವಿಧಾನದಲ್ಲಿ ದೇವಿಯನ್ನೆಂದೂ

ನಾನು ಪೂಜಿಸಿಲ್ಲ. ಯಾರಿಗಾದರೂ ಅದು ಅತ್ಯಂತ ಕಠಿಣವಾದ ಮಾರ್ಗ, ಬೇಡವೆಂದೇ ನಾನು ಹೇಳುತ್ತೇನೆ.''

* * * *

'ತಾವೇಕೆ ತಮ್ಮ ಪತ್ನಿಯೊಡನೆ ಗೃಹಸ್ಥಾಶ್ರಮದಲ್ಲಿ ಬಾಳಲಿಲ್ಲ?' ಎಂದೊಬ್ಬ ಶಿಷ್ಯರು ಕೇಳಿದ್ದಕ್ಕೆ, ಭಗವಾನ್ ರಾಮಕೃಷ್ಣರು ಒಂದು ಕಥೆಯನ್ನು ಹೇಳಿದರು:

''ನೀನು ಕೇಳಿದ ಪ್ರಶ್ನೆಗುತ್ತರವಾಗಿ ಒಂದು ಕಥೆಯನ್ನು ಹೇಳುತ್ತೇನೆ. ಒಂದಾನೊಂದು ದಿವಸ ಪರಮಶಿವನ ಮಗನಾದ ಗಣೇಶ ಒಂದು ಬೆಕ್ಕನ್ನು ತನ್ನ ಉಗುರಿನಿಂದ ಪರಚಿ ಗಾಯಪಡಿಸಿದನು. ಬಳಿಕ ತಾಯಿಯ ಹತ್ತಿರಕ್ಕೆ ಹೋದಾಗ ಆಕೆಯ ಕೆನ್ನೆಯಲ್ಲಿ ಒಂದು ಗಾಯ ಕಾಣಿಸಿತು. ಗಣೇಶ 'ಅಮ್ಮಾ, ಇದೇನು? ನಿನ್ನ ಕೆನ್ನೆಯನ್ನು ಯಾರು ಗಾಯಪಡಿಸಿದರು?' ಎಂದು ಕೇಳಿದನು.

ಅದಕ್ಕೆ ಪಾರ್ವತಿ. ''ಮಗನೇ, ಇದು ನೀನು ಮಾಡಿದ ಕೆಲಸವೇ ಅಲ್ಲವೇ? ನೀನು ಉಗುರಿನಿಂದ ಪರಚಿದ ಗಾಯವೇ ಇದು'' ಎಂದಳು.

ಗಣೇಶ ಬೆಚ್ಚಿಬಿದ್ದು, ''ಇದೇನು ವಿಪರೀತ? ನಾನು ಯಾವಾಗ ನಿನ್ನನ್ನು ಪರಿಚಿದೆನಮ್ಮಾ?'' ಎಂದು ಕೇಳಿದನು.

''ಮುದ್ದು ಮಗು! ನೀನು ಬೆಕ್ಕನ್ನು ಹಿಂಸಿಸಿ ಪರಚಿದ್ದನ್ನು ಮರೆತೆಯಾ?'' ಎಂದಳು ಗೌರಿ.

''ಹೌದು ಪರಚಿದ್ದುಂಟು. ಅದರೆ ಆ ಗಾಯ ನಿನ್ನ ಕೆನ್ನೆಗೆ ಹೇಗೆ ಬಂದಿತು?'' ಎಂದು ಗಣೇಶ ಕೇಳಿದ.

''ಮಗು, ಇಡೀ ಜಗತ್ತೆಲ್ಲಾ ನನ್ನ ದೇಹವಲ್ಲವೆ? ಯಾರಿಗೆ ಏನು ಗಾಯವಾದರೂ ಅದು ನನಗಾದ ಗಾಯವಲ್ಲದೆ ಮತ್ತೇನು?'' ಎಂದಳು ತಾಯಿ.

''ಇದಾದನಂತರ ಗಣೇಶನು ಯಾರನ್ನು ಮದುವೆಯಾಗ ಬಲ್ಲ? ಯಾವ ಸ್ತ್ರೀಯನ್ನು ಕಂಡರೂ ಅವಳು ತನ್ನ ತಾಯಿಯೆಂದೇ ಭಾವಿಸಿದನು. ವಿವಾಹದ ಯೋಚನೆಯನ್ನೇ ಬಿಟ್ಟನು. ನನ್ನ ಕಣ್ಣಿಗೂ ಹಾಗೆಯೇ ಸ್ತ್ರೀಯರೆಲ್ಲ ಪಾರ್ವತಿಯಂತೆ ಗೋಚರಿಸುತ್ತಾರೆ. ನಾನೇನು ಮಾಡಲಿ?''

೮

## ಮೂಕನೂ ಮಾತಾಡುತ್ತಾನೆ!

ಒಂದು ದಿನ ಪ್ರಸಿದ್ಧ ಬ್ರಹ್ಮಸಮಾಜ ನಾಯಕರಾದ ಕೇಶವ ಚಂದ್ರಸೇನರು ಭಗವಾನ್ ಶ್ರೀರಾಮಕೃಷ್ಣರನ್ನು ದಕ್ಷಿಣೇಶ್ವರದಲ್ಲಿ ಕಂಡು ಮಾತಾಡುತ್ತಿದ್ದರು.

"ಅದೇನು ಕಾರಣವೋ, ಒಳ್ಳೆಯ ವಿದ್ಯಾಶಿಕ್ಷಿತರಾದ ವಿದ್ವಾಂಸರೂ ಕೂಡ ಮೂರ್ಖರಾಗಿಯೇ ಇರುವರು. ಶಾಸ್ತ್ರಗಳನ್ನೆಲ್ಲಾ ಓದಿ ಕಲಿತರೂ ಜ್ಞಾನವನ್ನು ಪಡೆಯದೆ ಆಸೆ ಮೋಹಗಳನ್ನು ಬಿಡಲಾರದೆ ತತ್ತಳಿಸುತ್ತಾರೆ. ಇದು ಬಹಳ ಆಶ್ಚರ್ಯ ?" ಎಂದು ಕೇಶವ ಚಂದ್ರರು ಹೇಳಿದರು.

ಅದಕ್ಕೆ ರಾಮಕೃಷ್ಣರು ಉತ್ತರ ಕೊಟ್ಟರು :

"ಹದ್ದುಗಳು ಆಕಾಶದಲ್ಲಿ ಹಾರುತ್ತವೆ. ಬಹಳ ಎತ್ತರದಲ್ಲಿ, ಶುದ್ಧವಾಯು ಮಂಡಲದಲ್ಲಿಯೇ ಹಾರುತ್ತವೆ. ಆದರೂ ಅದರ ದೃಷ್ಟಿ ಕೆಳಗೆ ಸತ್ತು ಬಿದ್ದಿರುವ ಪ್ರಾಣಿ ಶವ, ಮಾಂಸ, ಎಲುಬುಗಳ ಮೇಲೆಯೇ ನಾಟಿರುತ್ತದೆ."

ಶ್ರೇಷ್ಠವಾದ ಗ್ರಂಥಗಳನ್ನೋದಿದ್ದರೂ ಕಾಮುಕರ ಮನಸ್ಸು ಕಾಮ ವಸ್ತುಗಳಲ್ಲಿಯೇ ಅಲೆಯುತ್ತದೆ. ವಿದ್ಯೆ ಬೇರೆ, ಆಸೆಪಡುವ ವಿಷಯ ಬೇರೆ. ಆಸೆ ಮೋಹಗಳಿರುವವರೆಗೂ ನಾವು ಎಷ್ಟೇ ಒಳ್ಳೆಯ ಪುಸ್ತಕ ಓದಿದರೂ ಜ್ಞಾನ ಲಾಭವಾಗುವುದಿಲ್ಲ.

ಬರಿಯ ವಿದ್ಯೆಯಿಂದ ಪ್ರಯೋಜನವಿಲ್ಲ. ಭಾಷಾ ಶಿಕ್ಷಣವೂ ಶ್ಲೋಕಗಳನ್ನು ಕಂಠ ಪಾಠವಾಗಿ ಒಪ್ಪಿಸುವ ಕೌಶಲ್ಯವೂ ಇದರಿಂದುಂಟಾಗ ಬಹುದು; ಮಂತ್ರಗಳನ್ನೆಲ್ಲಾ ತಪ್ಪಿಲ್ಲದೆ ಶುದ್ಧವಾಗಿ ಉಚ್ಚರಿಸಬಹುದು; ಅಷ್ಟೇ. ನಾವು ಯಾವ ವಿಷಯದಲ್ಲಿ ಆಸಕ್ತರಾಗುತ್ತೇವೆಯೋ ಅವೇ ನಮ್ಮನ್ನು ಉನ್ನತಿಗೊಳಿಸುತ್ತವೆ. ಅಥವಾ ಕೀಳುಪಡಿಸುತ್ತವೆ. ಮಣ್ಣೋ ಹೊನ್ನೋ ಹೆಣ್ಣೋ ನಮ್ಮ ಮನಸ್ಸನ್ನಾಕರ್ಷಿಸಿದರೆ ನಾವು ಎಷ್ಟೇ ಶಾಸ ಗಳ ನ್ನೋದಿ ಕಲಿತರೂ ಜ್ಞಾನವುಂಟಾಗುವುದಿಲ್ಲ; ಮೋಕ್ಷವೂ ದೊರಕುವು ದಿಲ್ಲ. ವಿದ್ಯಾವಂತರಾಗಿ ಒಳ್ಳೆಯ ಉಪನ್ಯಾಸಗಳನ್ನು ಮಾಡಬಹುದು. ಬ್ರಹ್ಮ, ಪರವಸ್ತು, ಜ್ಞಾನಯೋಗ, ಭಕ್ತಿಯೋಗ, ಮೂಲಪ್ರಕೃತಿ,

ಜೀವಾತ್ಮ, ಪರಮಾತ್ಮ ಎಂದೆಲ್ಲಾ ವಾದಿಸಿ ಮಾತಿನ ಸುರಿಮಳೆಯಲ್ಲಿ ಕೇಳುವವರನ್ನು ಭ್ರಮೆಗೊಳಿಸಬಹುದು. ಆದರೆ ನಾವು ತರ್ಕಿಸಿದ ವಿಷಯ ಗಳೆಲ್ಲಾ ಮಾತಿನಲ್ಲಿ ತೇಲಿ ಹೋಗುತ್ತವೆಯೇ ಅಲ್ಲದೆ ನಮಗಾಗಲಿ ಪ್ರಯೋಜನಕಾರಿಯಾಗುವುದಿಲ್ಲ. ಹೃದಯ ಕರಗಿ ಮನಸ್ಸು ಸ್ಥಿರವಾಗಿ ದೇವರಲ್ಲಿ ನೆಲಸಿದರೆ ಮಾತ್ರ ಕಲಿತ ವಿದ್ಯೆ ಫಲಕಾರಿ. ಅದಿಲ್ಲದಿದ್ದರೆ ಶಾಸ್ತ್ರ ಪುರಾಣಗಳನ್ನೋದುವುದರಿಂದ ಏನೂ ಪ್ರಯೋಜನವಿಲ್ಲ. ಸ, ರಿ, ಗ, ಮ, ಪ, ದ, ನಿ, ಎಂದು ಸ್ವರಗಳ ಹೆಸರನ್ನು ವಿವರಿಸಿದರೆ ಅದು ಸಂಗೀತವಲ್ಲ. ಹಾಗೆಯೇ ಸರಿಯಾದ ವಾಕ್ಯಗಳನ್ನು ಕೌಶಲ್ಯದಿಂದ ಜೋಡಿಸಿ ಜ್ಞಾನ ವೈರಾಗ್ಯಗಳ ವಿಷಯವಾಗಿ ಪ್ರಸಂಗ ಮಾಡುವುದು ಸುಲಭ, ಆದರೆ ಜ್ಞಾನವೈರಾಗ್ಯಗಳಲ್ಲಿ ನಿರತವಾದ ಮನೋ ನೆಲೆಯೂ ನಿಜವಾದ ಸನ್ಯಾಸ ಜೀವನವೂ ಬಹಳ ಕಷ್ಟ.

* * * *

"ಪಂಚಾಂಗದಲ್ಲಿ, ಯಾವ ತಿಂಗಳಲ್ಲಿ ಯಾವ ತಿಥಿಯಲ್ಲಿ ಎಷ್ಟು ಮಳೆಯುಂಟಾಗುತ್ತದೆಂಬ ವಿಷಯಗಳನ್ನು ಗುಣಿಸಿ ನೋಡಿ ಬರೆದಿಟ್ಟಿರು ತ್ತಾರೆ. ಹಾಗೆಯೇ ಮಳೆಯೂ ಸುರಿಯಬಹುದು. ಆದರೆ ಪಂಚಾಂಗದ ಹಾಳೆಗಳನ್ನು ತೆಗೆದು ಹಿಂಡಿದರೆ ನೀರು ತೊಟ್ಟಿಕ್ಕುತ್ತದೆಯೇ? ಎಷ್ಟೇ ಹಿಂಡಿದರೂ ನೀರು ಬರುವುದಿಲ್ಲ. ಹಾಗೆಯೇ ಅನೇಕ ಧರ್ಮಗ್ರಂಥಗಳಲ್ಲಿ ಬರೆದಿರುವ ಒಳ್ಳೊಳ್ಳೆಯ ವಿಷಯಗಳನ್ನೆಲ್ಲಾ ಓದಿದ ಮಾತ್ರದಿಂದ ಹೃದಯದಲ್ಲಿ ಭಕ್ತಿಯುಂಟಾಗುವುದಿಲ್ಲ. ಆ ಗ್ರಂಥಗಳಲ್ಲಿ ಹೇಳಿರುವಹಾಗೆ ಆಸೆಯನ್ನಡಗಿಸಿದರೆ ಭಕ್ತಿ ತಾನೇ ಜನಿಸುತ್ತದೆ."

"ಭಗವಂತನ ಸಾನ್ನಿಧ್ಯದಲ್ಲಿ ವಿದ್ಯೆಯೂ ಪ್ರತಿಭೆಯೂ ಎಷ್ಟರವು? ಅಲ್ಲಿ ಮೂಕನೂ ಮಾತಾಡುತ್ತಾನೆ; ಕುರುಡರು ದೃಷ್ಟಿಯನ್ನು ಪಡೆಯು ತ್ತಾರೆ. ಶಾಸ್ತ್ರಜ್ಞರಾದ ಪಂಡಿತರೂ ವಿದ್ಯೆಯ ವಾಸನೆಯೇ ಇಲ್ಲದವರೂ ದೇವರ ದೃಷ್ಟಿಯಲ್ಲಿ ಒಂದೇ ಆಗುತ್ತಾರೆ."

"ಗಾಂಜಾ!" "ಗಾಂಜಾ!" ಎಂದು ಸಾವಿರ ಸಲ ಬಾಯಿ ಬಿಟ್ಟು ಹೇಳಿದ ಮಾತ್ರಕ್ಕೆ ಅಮಲು ಉಂಟಾಗುವುದಿಲ್ಲ, ಅಲ್ಲವೇ? ಸ್ವಲ್ಪ ಗಾಂಜಾವನ್ನು ತೆಗೆದು ಪುಡಿಮಾಡಿ ನೀರಿನಲ್ಲಿ ಬೆರೆಸಿ ಕುಡಿದರೆ ಅಮಲೇರು ತ್ತದೆ. ಸಾವಿರಾರು ದೇವರ ನಾಮಗಳನ್ನು ಬಾಯಿನಿಂದುಚ್ಚರಿಸಿದರೆ

ಮಾತ್ರ ಪ್ರಯೋಜನವಿಲ್ಲ. ಮನಸ್ಸನ್ನು ಸ್ಥಿರಗೊಳಿಸಿ ಧ್ಯಾನ ಸಾಧನೆಯನ್ನು ಮಾಡಬೇಕು. ಆಗ ಪರವಸ್ತುವಿನ ಸಾಕ್ಷಾತ್ಕಾರವಾಗುತ್ತದೆ.''

* * * *

ಒಬ್ಬ ಹುಡುಗ ಶಾಲೆಯ ಗೋಡೆಯ ಮೇಲೆ ನೇತುಹಾಕಿರುವ ಇಂಡಿಯಾ ದೇಶದ ನಕ್ಷೆಯಲ್ಲಿ ''ಕಾಶಿ'' ಎಂದು ಬರೆದಿರುವಕಡೆ ಒಂದು ಚುಕ್ಕಿಯನ್ನು ನೋಡಿ, ''ನಾನು ಕಾಶಿಯನ್ನು ನೋಡಿದ್ದೇನೆ'' ಎಂದು ಹೇಳಬಲ್ಲನೆ? ಶಾಸ್ತ್ರ ಪುಸ್ತಕಗಳನ್ನೋದಿ ಪರವಸ್ತುವಿನ ವಿಚಾರವಾಗಿ ಇತರರಿಗೆ ವಿವರಿಸುವುದೂ ಹೀಗೆಯೆ. ನಕ್ಷೆಯಲ್ಲಿ ಪರ್ವತ, ಊರು, ನದಿಗಳನ್ನೆಲ್ಲಾ ಗುರುತಿಸಬಹುದು. ಆದರೆ ಅವನ್ನು ನಾವು ಪ್ರತ್ಯಕ್ಷವಾಗಿ ನೋಡಿದ ಹಾಗಾಗುತ್ತದೆಯೆ? ಗ್ರಂಥಗಳೂ ಕೆಲವು ಕಡೆ ಕಠಿಣವಾಗಿ ''ಗ್ರಂಥಿ'' ಗಳಾಗುತ್ತವೆ. ಹೇಗಿದ್ದರೂ, ಎಷ್ಟೇ ಸ್ವಚ್ಛವಾಗಿದ್ದರೂ ಕೂಡ, ಧ್ಯಾನ, ಭಕ್ತಿ ಸಾಧನೆಗಳಿಲ್ಲದೆ ಶಾಸ್ತ್ರ ತತ್ತ್ವಗಳನ್ನೋದುವುದರಿಂದ ಏನೂ ಪ್ರಯೋಜನವಿಲ್ಲ. ದೇವರ ಕೃಪೆಯಿಂದ ನಮ್ರತೆಯೂ ಭಕ್ತಿಯೂ ಉಂಟಾಗದಿದ್ದಲ್ಲಿ, ನಮ್ಮ ವಿದ್ಯೆಯೆಲ್ಲಾ ಅಹಂಕಾರವನ್ನು ಹೆಚ್ಚಿಸುವುದಕ್ಕೆ ಮಾತ್ರ ಪ್ರಯೋಜನವಾಗುವುದು. ಕಲಿತ ವಿದ್ಯೆಯಿಂದ ''ನಾನು'' ಎಂಬ ಅಹಂಕಾರ ಹೆಚ್ಚಾಗಿ ಜ್ಞಾನಕ್ಕೆ ದಾರಿಯಿಲ್ಲದಂತೆ ಮಾಡುತ್ತದೆ.

ಅಹಂಕಾರವೆಂಬುದು ಒಂದು ಬೂದಿಯ ರಾಶಿಯ ಹಾಗೆ. ಅದರ ಮೇಲೆ ಅರಿವೆಂಬ ತಣ್ಣೀರನ್ನು ಎಷ್ಟೇ ಚೆಲ್ಲಿದರೂ ಅದನ್ನೆಲ್ಲಾ ಆ ರಾಶಿ ಹೀರುತ್ತದೆ. ಭಗವಂತನ ಮೇಲಿನ ಭಕ್ತಿಯಿಂದ ಮನಸ್ಸು ಕರಗಿದ ಹೊರತು ಅಹಂಕಾರ ತೊಲಗುವುದಿಲ್ಲ. ಎಷ್ಟೇ ಸಂಸ್ಕೃತ ಪಾಂಡಿತ್ಯವೂ ಇತರ ವಿದ್ಯಾಭ್ಯಾಸಗಳೂ ಇದ್ದರೂ ಅವೆಲ್ಲಾ ಬೂದಿ ರಾಶಿಯಲ್ಲಿ ಚೆಲ್ಲಿದ ನೀರಿನಂತಾಗುವುವು. ಪರವಸ್ತುವನ್ನು ಸಾಕ್ಷಾತ್ಕರಿಸುವ ವಿಧಾನಗಳನ್ನು ಮಾತ್ರ ಗ್ರಂಥಗಳು ಬೋಧಿಸುತ್ತವೆ. ಆದರೆ ಸಾಧನೆ, ಭಕ್ತಿ, ಧ್ಯಾನದಿಂದ ಈ ವಿಧಾನಗಳನ್ನು ಅನುಭವಕ್ಕೆ ತಂದರೆ ಮಾತ್ರ ಪ್ರಯೋಜನವುಂಟು.

ಅಂಗಡಿಗೆ ಸಾಮಾನಿನ ಪಟ್ಟಿಯನ್ನು ತೆಗೆದುಕೊಂಡು ಹೋಗಿ ಸಾಮಾನನ್ನು ಬೆಲೆಗೆ ಕೊಳ್ಳುತ್ತೇವೆ. ಈ ಪದಾರ್ಥವನ್ನು ಕೊಂಡು ಆದ ಮೇಲೆ ಪಟ್ಟಿಯಿಂದೇನು ಪ್ರಯೋಜನ? ಶಾಸ್ತ್ರಗಳೆಲ್ಲಾ ದೇವರನ್ನು ಮುಟ್ಟುವ ಮಾರ್ಗವನ್ನು ವಿವರಿಸಿವೆ. ಆದರೆ ಆ ಮಾರ್ಗದಲ್ಲೊಂದನ್ನು

ಹಿಡಿದು ದಾರಿ ನಡೆಯಬೇಕಾದುದು ಆವಶ್ಯಕವಲ್ಲವೆ? ಹಾಗೆ ಮಾಡದೆ ಅಂಗಡಿಯ ಸಾಮಾನು ಪಟ್ಟಿಯನ್ನು ಮನನ ಮಾಡುತ್ತಿದ್ದರೆ ಪದಾರ್ಥಗಳು ದೊರೆಯುತ್ತವೆಯೆ? ಒಂದೂರಿಗೆ ದಾರಿ ತಿಳಿದ ಮೇಲೆ ಆ ದಾರಿ ಹಿಡಿದು ಹೋದರೆ ಊರು ಸಿಕ್ಕುತ್ತದೆ. ದಾರಿ ತಿಳಿದುಕೊಂಡರೆ ಮಾತ್ರ ಸಾಲದು. ಆ ದಾರಿಯಲ್ಲಿ ನಡೆದು ಹೋದರೆ ಮಾತ್ರ ಊರು ಸೇರುತ್ತೇವೆ.

*    *    *    *

ಚೈತನ್ಯ ದೇವರು ದಕ್ಷಿಣ ದೇಶಕ್ಕೆ ಯಾತ್ರಾರ್ಥವಾಗಿ ಹೋದಾಗ ಒಬ್ಬ ಪಂಡಿತರು ಗೀತೆಯನ್ನೋದಿ ಉಪನ್ಯಾಸ ಮಾಡುತ್ತಿರುವುದನ್ನು ಕಂಡರು. ಕೇಳುತ್ತಿದ್ದ ಜನರ ಗುಂಪಿನಲ್ಲಿ ಒಬ್ಬ ಭಕ್ತನಿದ್ದನು. ಅವನಿಗೆ ಗೀತೆಯ ಒಂದು ಶ್ಲೋಕದ ಅರ್ಥವನ್ನು ತಿಳಿಯುವಷ್ಟು ಬುದ್ಧಿ ಶಕ್ತಿಯೂ ಇರಲಿಲ್ಲ. ಆದರೆ ಉಪನ್ಯಾಸ ನಡೆಯುತ್ತಿದ್ದ ಹಾಗೆಲ್ಲಾ ಆತನ ಕಣ್ಣುಗಳಿಂದ ಧಾರೆ ಧಾರೆಯಾಗಿ ಕಂಬನಿ ಸುರಿಯುತ್ತಲೇ ಇತ್ತು.

"ಏಕೆ ಅಳುತ್ತಿರುವಿ, ಮಗನೆ? ನೀನು ಏನನ್ನು ತಿಳಿದುಕೊಂಡೆ?" ಎಂದು ಚೈತನ್ಯ ದೇವರು ಆತನನ್ನು ಕೇಳಿದರು.

ಅದಕ್ಕೆ ಭಕ್ತನು ಹೇಳಿದನು:

"ರಥದ ಮೇಲೆ ಕೃಷ್ಣಭಗವಾನನನ್ನೂ ಅರ್ಜುನನನ್ನೂ ನೋಡುತ್ತಿದ್ದೇನೆ. ಅದರಿಂದಲೇ ನಾನು ಕಣ್ಣೀರು ಸುರಿಸುತ್ತಿದ್ದೇನೆ. ಉಪನ್ಯಾಸ ನನ್ನ ಕಿವಿಗೆ ಬೀಳಲಿಲ್ಲ."

ಓದು ಬರಹ ಬಾರದ ಈ ಭಕ್ತನೇ ನಿಜವಾಗಿಯೂ ಜ್ಞಾನಿ. ಕೃಷ್ಣನ ಮೇಲೆ ಇವನಿಗಿದ್ದ ಪ್ರೇಮವೇ ಸಕಲ ಶಾಸ್ತ್ರಗಳ ಸಾರ.

೯

## ಸನ್ಯಾಸಿ ಕಥೆ

ಒಂದಾನೊಂದು ಗುಡಿಯ ಪ್ರಾಕಾರದಲ್ಲಿ ಸನ್ಯಾಸಿಯೊಬ್ಬನು ವಾಸವಾಗಿದ್ದನು. ಎದುರಿಗೆ ಒಬ್ಬ ಸೂಳೆಯ ಮನೆ. ಆ ಮನೆಗೆ ಪ್ರತಿದಿನ ಜನರು ಬಂದು ಹೋಗುವುದನ್ನು ಸನ್ಯಾಸಿ ನೋಡುತ್ತಲೇ ಇದ್ದನು. "ಇಷ್ಟೊಂದು ಜನರು ಕೆಟ್ಟು ಹೋಗುತ್ತಿದ್ದಾರಲ್ಲಾ!" ಎಂದು ಸನ್ಯಾಸಿ ವ್ಯಥೆಪಟ್ಟು, ಒಂದು ದಿನ ಆ ಸೂಳೆಯನ್ನು ಕರೆಸಿ ಖಂಡಿಸಿದನು:

“ಎಲೈ ಪಾಪಿ! ರಾತ್ರಿ ಹಗಲೂ ನೀನು ಕೆಟ್ಟ ಮಾರ್ಗದಲ್ಲಿಯೇ ಹೋಗುತ್ತಿದ್ದೀಯೆ. ಯಮ ನಿನ್ನ ಪ್ರಾಣವನ್ನು ಸೆಳೆದುಕೊಂಡು ಹೋಗುವಾಗ ನೀನೇನು ಮಾಡುವಿ?”

ಈ ಮಾತು ಆಕೆಯ ಮನಸ್ಸನ್ನು ಚುಚ್ಚಲು, ಅವಳು ಮನೆಗೆ ಹೋಗಿ ತನ್ನ ಪಾಪ ಕೆಲಸಗಳಿಗಾಗಿ ಪಶ್ಚಾತ್ತಾಪ ಪಟ್ಟು, ದೇವರನ್ನು ಕುರಿತು ಪ್ರಾರ್ಥಿಸತೊಡಗಿದಳು: “ಭಗವಂತ! ನಾನು ಮಾಡುತ್ತಿರುವ ಪಾಪವನ್ನೆಲ್ಲಾ ನೀನೇ ಪರಿಹರಿಸಬೇಕು.”

ಈ ರೀತಿ ಪ್ರತಿದಿನವೂ ಸೂಳೆ ತನ್ನ ಪಾಪಗಳಿಗಾಗಿ ದೇವರ ಕ್ಷಮೆಯನ್ನು ಬೇಡುತ್ತಾ ಪಶ್ಚಾತ್ತಾಪದಿಂದ ಬೇಯುತ್ತಿದ್ದಳು. ಆದರೆ ಅವಳಿಗೆ ಜೀವನೋಪಾಯಕ್ಕೆ ಬೇರೆ ಮಾರ್ಗ ಇಲ್ಲದ ಕಾರಣ ವೇಶ್ಯಾ ವೃತ್ತಿಯಿಂದಲೇ ಜೀವಿಸುತ್ತಿದ್ದಳು. ಆದರೆ ಹೊತ್ತು ಹೊತ್ತಿಗೂ, “ಅಯ್ಯೋ! ಬೇರೆ ದಾರಿಯಿಲ್ಲದೆ ಈ ಪಾಪವೃತ್ತಿಯನ್ನವಲಂಬಿಸಿದ್ದೇನೆ. ದೇವರೇ, ನನ್ನನ್ನು ಹೇಗೋ ನೀನೇ ಕಾಪಾಡಬೇಕು!” ಎಂದು ದೈನ್ಯದಿಂದ ಪ್ರಾರ್ಥಿಸಿ ಮೊರೆಯಿಡುತ್ತಿದ್ದಳು.

ಸನ್ಯಾಸಿ ಕೆಲವು ಕಾಲ ನೋಡಿದನು. “ಏನು! ನನ್ನ ಮಾತು ಫಲಿಸಲಿಲ್ಲವಲ್ಲಾ! ಇವಳು ತನ್ನ ಪಾಪಮಾರ್ಗವನ್ನು ಬಿಡುವ ಹಾಗಿಲ್ಲ. ನೋಡೋಣ, ಇವಳ ಬಳಿ ಬರುವ ಜನರೆಷ್ಟು, ಇವಳ ಪಾಪದ ಹೊರೆಯೆಷ್ಟು ಎಂಬುದನ್ನು ಅಳೆಯೋಣ” ಎಂದು ನಿಶ್ಚಯಮಾಡಿಕೊಂಡನು.

ಅಂದಿನಿಂದ ಸನ್ಯಾಸಿಯ ಗಮನವೆಲ್ಲಾ ಸೂಳೆಯ ಮನೆಯ ಮೇಲೆಯೆ. ಅವಳ ಮನೆಗೆ ಬಂದವರ ಸಂಖ್ಯೆಯನ್ನು ಎಣಿಸುವುದೇ ಅವನ ಕೆಲಸವಾಯಿತು. ಒಬ್ಬೊಬ್ಬನಿಗೂ ಒಂದೊಂದು ಕಲ್ಲು, ಎಂದು ಕಲ್ಲುಗಳನ್ನು ಜೋಡಿಸುತ್ತಾ ಬಂದನು. ಕೆಲಕಾಲಾನಂತರ ಕಲ್ಲು ರಾಶಿ ಬಹಳ ದೊಡ್ಡದಾಯಿತು. ಪುನಃ ಸನ್ಯಾಸಿ ಸೂಳೆಯನ್ನು ಕರೆಯಿಸಿ ಹೇಳುತ್ತಾನೆ:

“ನೋಡಿದೆಯಾ ಈ ದೊಡ್ಡ ಕಲ್ಲುರಾಶಿಯನ್ನು? ಈ ನಿನ್ನ ನೀಚ ಪಾಪಕರ್ಮಗಳ ಮೊತ್ತವನ್ನು. ನಾನು ಹೇಳಿದ ಹಾಗೆ ಕೇಳದೆ ಪಾಪ ಕೆಲಸದಲ್ಲಿಯೇ ಮುಳುಗಿರುವಿ. ನಾನು ಎಚ್ಚರಿಸಿದ ಮೇಲೆಯೂ ನೀನು ಮಾಡಿದ ಪಾಪದ ಗುಡ್ಡೆಯಿದು. ನೀನು ಅನುಭವಿಸಲಿಕ್ಕಿರುವ ದಂಡನೆಯ ಪ್ರಮಾಣವನ್ನು ಇದರಿಂದ ತಿಳಿ. ನಿನಗೆ ಗತಿಯೇ ಇಲ್ಲ, ಹೋಗು!”

ಸೂಳೆ ಕಲ್ಲಿನ ರಾಶಿಯನ್ನು ನೋಡಿ ಅತ್ಯಂತ ಕ್ಲೇಶದಿಂದಲೂ ಭಯ

ದಿಂದಲೂ ಮನೆಗೆ ಹೋದಳು. "ಅಯ್ಯೋ ದೇವರೇ! ನಾನೇನು ಮಾಡಲಿ!" ಎಂದು ದುಃಖವನ್ನು ತಡೆಯಲಾರದೆ ಅತ್ತಳು. "ಹೇ ಕೃಷ್ಣಾ! ನನ್ನನ್ನು ಹೇಗಾದರೂ ಉದ್ಧಾರ ಮಾಡಲಾರೆಯಾ? ನನ್ನ ಪ್ರಾಣವನ್ನಾದರೂ ನೀಗಿಸು" ಎಂದು ಬಹಳ ಹೊತ್ತು ದೈನ್ಯ ಪ್ರಾರ್ಥನೆಯಲ್ಲಿ ಪರವಶಳಾದಳು.

ದೇವರು ಆ ನಿಷ್ಕಪಟ ಹೆಂಗಸಿನ ಮೇಲೆ ಕೃಪೆಗೊಂಡನು. ಯಮಧರ್ಮರಾಜ ಆ ರಾತ್ರಿಯೇ ಆಕೆಯ ಪ್ರಾಣವನ್ನು ತೆಗೆದುಕೊಂಡನು.

ಇತ್ತ ಸನ್ಯಾಸಿಯ ಕಾಲವೂ ಆ ರಾತ್ರಿಯೇ ಮುಗಿಯಿತು. ಆತನ ಪ್ರಾಣವೂ ದೇಹವನ್ನು ತ್ಯಜಿಸಿ ಹೊರಟು ಹೋಯಿತು.

ಇದೇನು ಆಶ್ಚರ್ಯದಲ್ಲಿ ಆಶ್ಚರ್ಯ! ಸನ್ಯಾಸಿಯ ಪ್ರಾಣವನ್ನು ಹಿಡಿದೆಳೆದುಕೊಂಡು ಯಮಕಿಂಕರರು ನರಕಕ್ಕೆ ಹೋಗುತ್ತಿದ್ದಾರೆ! ತನ್ನ ಪಾಪಕ್ಕಾಗಿ ಪಶ್ಚಾತ್ತಾಪ ಪಟ್ಟು ಕರಗಿ ನೀರಾದ ಸೂಳೆಯ ಪ್ರಾಣವೋ ಶ್ರೇಷ್ಠವಾದ ವಿಷ್ಣು ಲೋಕಕ್ಕೆ ಹೋಗುತ್ತಿದೆ!

ಸನ್ಯಾಸಿ ದೇವಲೋಕಕ್ಕೆ ಹೋಗುತ್ತಿದ್ದ ಸೂಳೆಯನ್ನು ನೋಡಿದೊಡನೆಯೆ, "ಎಲೌ ಸೂಳೆ! ನೀನು ಹೇಗೆ ಪರಮಪದವನ್ನು ಸೇರುವಿ? ಎಣಿಕೆಯಿಲ್ಲದಷ್ಟು ಪಾಪಗಳನ್ನು ನೀನು ಮಾಡಲಿಲ್ಲವೆ? ನಾನೋ ಶುದ್ಧ ಸನ್ಯಾಸ ಜೀವನದಲ್ಲಿ ಕಾಲಕಳೆದೆ, ಒಂದು ಪಾಪವನ್ನೂ ಮಾಡಿಲ್ಲ. ನನ್ನನ್ನು ನರಕಕ್ಕೂ ನಿನ್ನನ್ನು ದೇವ ಲೋಕಕ್ಕೂ ಒಯ್ಯುತ್ತಿದ್ದಾರೆ! ಇದೇನು ನ್ಯಾಯ?" ಎಂದು ಕೂಗಾಡಿದನು. ಆಗ ಸೂಳೆಯನ್ನು ಕರೆದುಕೊಂಡು ಹೋಗುತ್ತಿದ್ದ ವಿಷ್ಣುದೂತರು ಸನ್ಯಾಸಿಗೆ ಸಮಾಧಾನ ಹೇಳಿದರು:

"ಎಲೌ ಸನ್ಯಾಸಿ! ಕೂಗಾಡಬೇಡ. ದೇವರಿಗೆ ನ್ಯಾಯವೆಲ್ಲಾ ಸರಿಯಾಗಿಯೇ ಗೊತ್ತಿರುವುದು! ನಿನ್ನ ಸನ್ಯಾಸ ಬಾಳೆಲ್ಲಾ ಬರಿಯ ಹೊರಗಿನ ವೇಷಮಾತ್ರವಾಗಿತ್ತು. ನೀನು ಸನ್ಯಾಸಿಯಾದದ್ದು ಆಡಂಬರ ಕೀರ್ತಿಗಳಿಗಾಗಿ. ಅಗೋ ನೋಡು, ನಿನ್ನ ಪಂಚಭೌತಿಕ ದೇಹವನ್ನು! ಆ ದೇಹ ಮಾತ್ರವೇ ಸನ್ಯಾಸವನ್ನು ಆಚರಿಸಿತು. ಅದನ್ನೀಗ ಜನರು ಹೂವುಗಳಿಂದ ಅಲಂಕರಿಸಿ ವಾದ್ಯ ಘೋಷದೊಡನೆ ತೆಗೆದುಕೊಂಡು ಹೋಗುತ್ತಿದ್ದಾರೆ. ನೀನು ಪರಿಶುದ್ಧವಾಗಿಟ್ಟಿದ್ದ ದೇಹ ಅದರ ಕೀರ್ತಿಯನ್ನು ಪಡೆಯಿತು. ಆದರೆ ನೀನೋ, ನರಕಕ್ಕೆ ಹೋಗುತ್ತಿದ್ದೀಯೆ. ಈ ಸೂಳೆಯ ದೇಹ ಅನೇಕ ಪಾಪ ಕಾರ್ಯಗಳನ್ನು ಮಾಡಿತು. ಅಲ್ಲಿ ನೋಡು, ಅವಳ ಮೃತ ದೇಹ

ವನ್ನು ಹದ್ದು ಕಾಗೆಗಳು ತಿನ್ನುತ್ತಿವೆ! ಅವಳ ಶವವನ್ನು ಸರಿಯಾಗಿ ದಹನ ಕೂಡ ಮಾಡಲಿಲ್ಲ. ಆದರೆ ಅವಳ ಅಂತರಾತ್ಮ ಪರಿಶುದ್ಧವಾಗಿದ್ದುದರಿಂದ ಆಕೆಯನ್ನು ಪರಮಾತ್ಮನ ಸನ್ನಿಧಾನಕ್ಕೆ ಕರೆದೊಯ್ಯುತ್ತೀವೆ. ಸೂಳೆ ಮಾಡಿದ ಪಾಪಗಳನ್ನೆಲ್ಲಾ ಎಣಿಸುವುದರಲ್ಲೇ ನೀನು ಕಾಲಕಳೆದೆಯಲ್ಲವೆ? ನಿನ್ನ ಮನಸ್ಸೆಲ್ಲಾ ಅವಳ ಪಾಪಕಾರ್ಯದಲ್ಲೇ ನೆಲೆಸಿದ್ದುದರಿಂದ ಆ ಪಾಪದ ಕೊಳೆಯೆಲ್ಲಾ ನಿನಗಂಟಿರುವುದು. ಭಗವಂತನಲ್ಲಿ ಶರಣು ಹೊಂದಿ ತನ್ನ ಪಾಪಕ್ಕಾಗಿ ಪಶ್ಚಾತ್ತಾಪ ಪಟ್ಟ ಸೂಳೆಯ ಮನಸ್ಸು ಪರಿಶುದ್ಧವಾಗಿ ಆಕೆಯ ಪಾಪ ಪರಿಹಾರವಾಯಿತು. ಅವಳ ಪಾಪಗಳನ್ನು ಎಣಿಸುತ್ತಾ ಕಲ್ಲು ಗುಡ್ಡೆಯನ್ನು ಮಾಡಿದ ನೀನು ಈಗ ಆ ಪಾಪಗಳ ಭಾರವನ್ನೆಲ್ಲಾ ಹೊರುವ ಹಾಗಾಯಿತು.”

ಇತರರು ಮಾಡುವ ತಪ್ಪುಗಳನ್ನೆಣಿಸುವುದು ಭಕ್ತನ ಕೆಲಸವಲ್ಲ. ಭಗವಂತನ ಲೀಲೆಯನ್ನು ಅರಿಯುವುದು ಯಾರಿಗೆ ಸಾಧ್ಯ? ಅವನು ತೋರಿಸಿದ ಮಾರ್ಗವನ್ನು ಹಿಂಬಾಲಿಸಿ ಅವನ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದೇ ನಮ್ಮ ಕೆಲಸ. ಅದರ ಶುಭಾಶುಭಗಳನ್ನು ಆತನೇ ಬಲ್ಲ.

ತನ್ನ ಮನ ಹೃದಯಗಳನ್ನು ಪರಿಶುದ್ಧವಾಗಿಟ್ಟುಕೊಂಡು, ಇತರರ ತಪ್ಪುಗಳನ್ನು ಸಹಾನುಭೂತಿಯಿಂದ ನೋಡಬೇಕು.

## ೧೦
## ಮಾತು ಮತ್ತು ಮೌನ

ದೇವರ ಕೃಪೆಯನ್ನು ಪಡೆದವನು ಭಕ್ತಿ ಸಾಧನೆಗಳಿಂದ ಜ್ಞಾನವನ್ನು ಸಂಪಾದಿಸಿದರೆ, ಏನನ್ನೂ ಮಾತನಾಡದೆ ಆತ ಇತರರಿಗೆ ಮಾರ್ಗದರ್ಶಕನಾಗುತ್ತಾನೆ. ಹೃದಯದಲ್ಲಿ ಭಕ್ತಿ ಉಕ್ಕಿ ಬಂದು ದೇವರ ಸಾಕ್ಷಾತ್ಕಾರವನ್ನು ಪಡೆದವರು ಮಾತ್ರ ಈ ಸ್ಥಿತಿಯನ್ನು ಪಡೆಯುವರು. ಓದಿ ಶಾಸ್ತ್ರಜ್ಞಾನವನ್ನು ಮಾತ್ರ ಗಳಿಸಿದರೆ ಸಾಲದು. ಹಿಮಾಚಲ ಪರ್ವತದ ಮಂಜುಗಡ್ಡೆಯ ವಿಚಾರವಾಗಿ ಪುಸ್ತಕವನ್ನೋದಿ ಅಥವಾ ಇತರರನ್ನು ಕೇಳಿ ತಿಳಿದುಕೊಂಡ ಒಬ್ಬ ಅದನ್ನು ವಿವರಿಸಿ ವರ್ಣಿಸಬಲ್ಲನೆ? ಆ ಮಂಜುಗಡ್ಡೆಯನ್ನು ಕಣ್ಣಿಂದ ಕಂಡು, ಮುಟ್ಟಿ, ನಾಲಗೆಯ ಮೇಲೆ ರುಚಿನೋಡಿದವರು

ಮಾತ್ರ ಮಂಜುಗಡ್ಡೆಯ ವಿಚಾರವಾಗಿ ಇತರರಿಗೆ ವರ್ಣಿಸಿ ಹೇಳುವ ಶಕ್ತಿಯನ್ನು ಪಡೆಯುತ್ತಾರೆ.

"ಮುಕ್ತಿಮಾರ್ಗವನ್ನು ನಾನು ಅರಿತುಕೊಂಡೆ; ಇತರರಿಗೂ ಅದನ್ನು ಉಪದೇಶಿಸಿ, ನನ್ನ ಸುತ್ತ ಒಂದು ಪ್ರತ್ಯೇಕ ಮತವನ್ನು ಉಂಟುಮಾಡುವೆ" ಎಂದು ಭಕ್ತ ಎಣಿಸಿದರೆ, ಅದು ಅಹಂಕಾರದ ಚೇಷ್ಟೆಯೆಂದು ತಿಳಿಯಬೇಕು. ದೇವರಿಂದ ಅಪ್ಪಣೆ ಚೀಟಿ ಬಂದರೆ ಇತರರಿಗೆ ಬೋಧಿಸುವ ಶಕ್ತಿ ಒಬ್ಬನಿಗೆ ತಾನಾಗಿಯೇ ಉಂಟಾಗುತ್ತದೆ. ಆ ಅಧಿಕಾರದ ಬಿಲ್ಲೆ ಇಲ್ಲದಿದ್ದರೆ ಅವನ ಜ್ಞಾನ ಬೋಧನೆಯೆಲ್ಲಾ ಕೇವಲ ಅಹಂಕಾರದ ಚಹರೆಯಲ್ಲದೆ ಮತ್ತೇನು?

* * * *

"ಪುಷ್ಪಗಳಲ್ಲಿ ಜೇನುತುಪ್ಪ ತುಂಬಿದ್ದರೆ ದುಂಬಿಗಳು ತಾವಾಗಿಯೇ ಬರುತ್ತವೆ. ಬೆಲ್ಲವಿರುವ ಜಾಗಕ್ಕೆ ಬರಲು ಇರುವೆಗೆ ಪ್ರತ್ಯೇಕ ಆಹ್ವಾನವನ್ನು ಕಳುಹಿಸಬೇಕಿಲ್ಲ. ಒಬ್ಬನು ನಿಜವಾಗಿಯೂ ಜ್ಞಾನವನ್ನು ಪಡೆದು ಅದರಲ್ಲೇ ತನ್ಮಯನಾದರೆ ಆತ ಯಾರನ್ನೂ ಕೂಗಿ ಕರೆಯಬೇಕಾಗಿಲ್ಲ. ಆತ ಆತ್ಮಶಕ್ತಿಯ ಅಮೃತಪ್ರವಾಹವಾಗಿ ಹರಿಯುವನು. ಎಲ್ಲರೂ ಅವನನ್ನು ತಾವಾಗಿಯೇ ಹುಡುಕಿಕೊಂಡು ಬರುವರು. ಇರುವೆಗಳನ್ನೂ ಜೇನುದುಂಬಿಗಳನ್ನೂ ಆಕರ್ಷಿಸುವ ಸವಿಮಧು ನಮ್ಮಲ್ಲಿರಬೇಕು. ಭಗವಂತ ಸೃಷ್ಟಿಸಿರುವ ಈ ಜಗತ್ತಿನಲ್ಲಿ ಮನಹೃದಯಗಳ ಪವಿತ್ರತೆಯೆಂಬುದು ಬಹಳ ಸಿಹಿಯಾದ ಪದಾರ್ಥ. ಶಿಷ್ಯ ವರ್ಗವನ್ನು ಅದು ತಾನಾಗಿಯೇ ಆಕರ್ಷಿಸುವುದು."

ಭಗವಂತನ ಕೃಪೆಯನ್ನು ಪಡೆಯದವರು ಪ್ರಚಾರ ಮಾಡಲು ಹೊರಟರೆ ಅದು ಪ್ರಯೋಜನವಿಲ್ಲದ ಶ್ರಮವೇ ಅಲ್ಲದೆ ಬೇರಲ್ಲ. ಅದು ಯಾರ ಮನಸ್ಸಿಗೂ ಅಂಟುವುದಿಲ್ಲ. ಭಕ್ತಿಯಿಂದಲೂ ಸಾಧನೆಯಿಂದಲೂ ದೇವರನ್ನು ಒಲಿಸಿ ಆತನ ಅಪ್ಪಣೆಯನ್ನು ಪಡೆದರೆ ಮಾತ್ರ ಶಿಷ್ಯರನ್ನು ಹೊಂದಿ ಗುರುವಾಗಿ ನಿಂತು ಕೆಲಸ ಮಾಡಬಹುದು. ದೇವರ ಕೃಪೆಯನ್ನು ಮಾಡುವ ಪ್ರಯತ್ನದಿಂದ ಏನೂ ಫಲವುಂಟಾಗುವುದಿಲ್ಲ.

ದೀಪ ಉರಿದರೆ ಹುಳುಗಳು ಎಲ್ಲಿಂದಲೋ ಗುಂಪು ಗುಂಪಾಗಿ ಬಂದು ಅದರಲ್ಲಿ ಬೀಳುವುದನ್ನು ನೋಡುತ್ತೇವೆ. ಈ ಹುಳುಗಳಿಗೆ ಯಾರೂ ಕರೆಕಳುಹಿಸುವುದಿಲ್ಲ. ಜ್ಞಾನವನ್ನು ಪಡೆದವರು ಅಗ್ನಿಯ ಹಾಗೆ. ಅವರ

ಕಾಂತಿ ಶಿಷ್ಯರನ್ನು ಆಕರ್ಷಿಸುತ್ತದೆ. ಆ ಶಿಷ್ಯರು ಎಲ್ಲಿಂದ ಬರುತ್ತಾರೆಂಬು ದನ್ನು ಹೇಳುವುದಕ್ಕೇ ಆಗುವುದಿಲ್ಲ.

* * * *

ದೇವರ ಕೃಪೆಯನ್ನು ಪಡೆದ ಗುರು ಏನನ್ನು ಮಾಡಿದರೂ ಏನು ಹೇಳಿದರೂ ಅದು ದೇವರನ್ನು ಆರಾಧಿಸುವ ಪೂಜೆಯಾಗುತ್ತದೆ. ಪ್ರತ್ಯೇಕ ವಾದ ಉಪದೇಶವೇ ಬೇಡ; ಧ್ಯಾನದೃಷ್ಟಿಯಲ್ಲಿ ಭಗವಂತನನ್ನು ಕಂಡು ಆತನ ಸ್ಮರಣೆಯಲ್ಲಿಯೇ ಮನಸ್ಸನ್ನು ಸ್ಥಿರಗೊಳಿಸಿದರೆ ಅದೇ ಇತರರಿಗೆ ಉಪದೇಶವಾಗಿ ಕೆಲಸ ಮಾಡುತ್ತದೆ. ಸಂಸಾರ ಬಂಧನಗಳಿಂದ ಮುಕ್ತ ನಾಗುವ ಸಲುವಾಗಿ ಒಬ್ಬನು ಮಾಡುವ ಪ್ರಯತ್ನವೇ ಇತರರಿಗೆ ಉಪದೇಶ ವಾಗುವುದು. ಅರಳಿದ ಪುಷ್ಪದಂತೆ ಅವನ ಮನಸ್ಸು ವಿಕಾಸವಾಗಿ ಮಧುವಿನಿಂದ ಕೂಡಿ ದುಂಬಿಗಳನ್ನಾಕರ್ಷಿಸಿ ಅವಕ್ಕೆ ಸವಿಯಾಹಾರ ವನ್ನುಣಿಸುತ್ತದೆ.

ದೊಡ್ಡ ಮಂಡಿಯಲ್ಲಿ ಧಾನ್ಯವನ್ನಳೆದು ಮಾರುವುದನ್ನು ನೋಡಿ ದ್ದೀರಾ? ಅಳೆದು ಹಾಕುವವನು ಬಿಡುವಿಲ್ಲದೆ ಅಳೆಯುತ್ತಲೇ ಇರುತ್ತಾನೆ. ಅಳೆಯುವ ಹಾಗೆಲ್ಲಾ ಧಾನ್ಯರಾಶಿ ಪುನಃ ತುಂಬುತ್ತಲೇ ಇರುತ್ತದೆ. ಹಾಗೇಯೇ ಸದ್ಗುರುವಿನ ಉಪದೇಶವೂ ಕೂಡ. ಆತ ದೇವರ ದೊಡ್ಡ ಮಂಡಿಯಿಂದ ಧಾನ್ಯವನ್ನಳೆಯುತ್ತಾನೆ; ಆತನೆಡೆ ಜ್ಞಾನೋಪದೇಶಗಳ ರಾಶಿ ಬಂದು ಬೀಳುತ್ತಲೇ ಇರುವುವು. ಅಳೆಯುವ ಧಾನ್ಯವೆಲ್ಲಾ ಭಗವಂತನಿಗೆ ಸೇರಿದ್ದು. ಚಿಕ್ಕ ಪುಟ್ಟ ಮಳಿಗೆಗಳಲ್ಲಿ ನಡೆಯುವ ವ್ಯಾಪಾರವೇ ಬೇರೆ ವಿಧ. ಈ ವ್ಯಾಪಾರದಲ್ಲಿ ಪದಾರ್ಥಗಳು ಬಹಳ ಬೇಗ ಮುಗಿದು ಹೋಗು ತ್ತವೆ. ಗ್ರಂಥಗಳನ್ನೋದಿ ಮಾಡುವ ಉಪದೇಶಕ್ಕೂ ದೇವರ ಕೃಪೆಯನ್ನು ಪೂರ್ಣವಾಗಿ ಪಡೆದ ಜ್ಞಾನಿಮಾಡುವ ಉಪದೇಶಕ್ಕೂ ಇದೇ ವ್ಯತ್ಯಾಸ. ದೇವರನ್ನು ಮುಟ್ಟಿದ ಗುರು ಮಾಡುವ ಉಪದೇಶದಲ್ಲಿ ಸಾಮಗ್ರಿಗಳಿಗೆ ಕೊರತೆಯಿಲ್ಲ. ಗ್ರಂಥ ಜ್ಞಾನದಿಂದ ಮಾಡುವ ಉಪದೇಶದಲ್ಲಿ ಬಹಳ ಬೇಗ ಸಾಮಾನು ಮುಗಿದು ಹೋಗುತ್ತದೆ.

* * * *

ಮಳೆ ಬೀಳುವಾಗ ಮನೆಯ ಛಾವಣಿಯಿಂದ ನೀರು ಧಾರೆ ಧಾರೆ ಯಾಗಿ ಕೆಳಗೆ ಸುರಿಯುತ್ತದೆ. ಗೋಮುಖ, ವ್ಯಾಘ್ರಮುಖಗಳ ಆಕಾರ ದಲ್ಲಿ ಅಲ್ಲಲ್ಲಿ ಕಟ್ಟಿರುವ ಸೂರುಗಳಿಂದ ನೀರು ದೊಡ್ಡ ಧಾರೆಯಾಗಿ ಬೀಳು

ವಾಗ ನೋಡುವವರಿಗೆ ನೀರು ಗೋವಿನ ಬಾಯಿನಿಂದ ಅಥವಾ ಹುಲಿಯ ಬಾಯೊಳಗಿಂದ ಹರಿಯುವ ಹಾಗೆ ಕಾಣಿಸುತ್ತದೆ. ವಾಸ್ತವದಲ್ಲಿ ಆಕಾಶ ದಿಂದ ಬೀಳುವ ಮಳೆ ನೀರೇ ಸೂರಿನ ಪ್ರವಾಹವಾಗುವುದು. ಜ್ಞಾನಿಗಳ ಉಪದೇಶ ವಾರ್ತೆಗಳೆಲ್ಲಾ ಭಗವಂತ ವರ್ಷಿಸುವ ಅಮೃತ ಪ್ರವಾಹ. ಆತನ ಕೃಪೆಗೆ ಪಾತ್ರರಾದ ಜ್ಞಾನಿಗಳ ಬಾಗಿಲಿನ ಮಾರ್ಗವಾಗಿ ಉಪದೇಶ ಪ್ರವಾಹ ಹರಿಯುವುದು.

ಕೊಡದಲ್ಲಿ ನೀರನ್ನು ತುಂಬಿಕೊಳ್ಳುವಾಗ ಪೂಳ್ ಪೊಳ್ಳೆಂಬ ಶಬ್ದ ವುಂಟಾಗುತ್ತದೆ. ಆದರೆ ಕೊಡದಲ್ಲಿ ನೀರು ತುಂಬಿದ ಕೂಡಲೆ ಈ ಶಬ್ದ ನಿಂತು ಹೋಗುತ್ತದೆ. ಶಾಸ್ತ್ರಗಳನ್ನೋದಿದವರು ಮಾತಿನ ಧಾರೆಯನ್ನೇ ಸುರಿಸಿ ವಾದಿಸುವರು. ಜ್ಞಾನಿಗಳಾದರೋ, ಮೌನವಾಗಿ ದೇವರ ಸಾನ್ನಿಧ್ಯ ವನ್ನು ಅನುಭವಿಸುತ್ತಾ ಆನಂದದಲ್ಲಿ ಮುಳುಗಿ ತೇಲುವರು.

ಔತಣಕ್ಕೆ ಜನರು ಕೂಡಿದಾಗ ಸ್ವಲ್ಪ ಹೊತ್ತಿನವರಿಗೂ ಗಿಜಿಗಿಜಿ ಶಬ್ದವೇ ಕೇಳಬರುವುದು. ಎಲ್ಲರೂ ಒಟ್ಟಿಗೆ ಮಾತನಾಡುವರು. ಆದರೆ ಊಟ ಪ್ರಾರಂಭವಾದೊಡನೆ ಶಬ್ದ ಅಡಗುತ್ತದೆ. ಬಡಿಸಲು ಶುರು ವಾದೊಡನೆಯೆ ಮುಕ್ಕಾಲು ಪಾಲು ಸದ್ದೆಲ್ಲಾ ನಿಂತುಹೋಗುತ್ತದೆ. ಪಾಯಸವನ್ನು ಬಡಿಸಿದೊಡನೆ ಊಟದ ಶಬ್ದ ಕೂಡ ಇರುವುದಿಲ್ಲ. ಉರ್ ಉರ್ರೆಂದು ಪಾಯಸವನ್ನು ಹೀರುವುದು ಮಾತ್ರವೇ ಕೇಳಿಸುತ್ತದೆ. ಊಟ ಮುಗಿದೊಡನೆಯೇ ಎಲ್ಲರೂ ಜಗುಲಿಯ ಮೇಲೆ ಮಲಗಿ ನಿದ್ರೆ ಹೋಗು ತ್ತಾರೆ!

ವಾದ ಪ್ರತಿವಾದಗಳೆಲ್ಲಾ ದೇವರನ್ನು ನೋಡುವ ವೊದಲು ತಾನೆ. ದೇವರನ್ನು ನೋಡಿದೊಡನೆಯೇ ಮಾತೆಲ್ಲಾ ಅಡಗಿ ಹೋಗುತ್ತದೆ.

ಸಂತೆಯ ಹೊರಗಡೆ ದೊಡ್ಡ ಕೂಗು ಕೇಳಿ ಬರುವುದು. ಅದೇನು ಶಬ್ದವೆಂದರೆ, ಸಂತೆಯ ಕೂಗಾಟವೆನ್ನುತ್ತೇವೆ. ಆದರೆ ಸಂತೆಯೊಳಕ್ಕೆ ಹೋದರೆ ಕೂಗು ಕೇಳಿಸುವುದಿಲ್ಲ; ಪದಾರ್ಥಗಳ ಬೆಲೆಯನ್ನು ಕೇಳುವುದ ರಲ್ಲೂ, ವ್ಯಾಪಾರ ಮುಗಿಸುವುದರಲ್ಲೂ ಗಮನ ಹೋಗುತ್ತದೆ. ಹೀಗೆಯೇ ಭಕ್ತಿಯೂ ಕೂಡ. ದೇವರಿಗೆ ಬಹಳ ದೂರದಲ್ಲಿ ನಿಂತಾಗ ವಾದ ಪ್ರತಿ ವಾದಗಳ ಕೂಗಾಟ ಬಹಳ ಹೆಚ್ಚಾಗಿರುತ್ತದೆ. ಭಗವಂತನನ್ನು ಸಮೀಪಿಸಿ ಆತನ ಸಾನ್ನಿಧ್ಯವನ್ನು ಸೇರಿದೊಡನೆಯೇ ವಾದ ಶಬ್ದಗಳೆಲ್ಲಾ ಅಡಗಿ ಮನಸ್ಸು ಆನಂದದಲ್ಲಿ ಲೀನವಾಗುತ್ತದೆ.

ಬಾಣಲಿಯ ಕಾದ ತುಪ್ಪದಲ್ಲಿ ಪೂರಿಯನ್ನು ಹಾಕಿದೊಡನೆಯೇ ದೊಡ್ಡ ಶಬ್ದವುಂಟಾಗುತ್ತದೆ. ಆದರೆ ಪೂರಿ ಬೆಂದ ಹಾಗೆಲ್ಲಾ ಶಬ ಅಡಗಿ ಹೋಗುವುದು. ಭಕ್ತಿಮಾರ್ಗವನ್ನವಲಂಬಿಸುವವರೂ ಕೂಡ ಮೊದಮೊದಲು ಬಹಳ ಮಾತಾಡುವರು. ಭಕ್ತಿ ಹೃದಯದಲ್ಲಿ ಪಕ್ವವಾದ ಹಾಗೆಲ್ಲಾ ಇವರ ಮಾತೂ ಅಡಗುತ್ತವೆ.

## ೧೧
## ಎಣ್ಣೆ ಬಟ್ಟಲು

ಒಂದಾನೊಂದು ಕಾಲದಲ್ಲಿ ನಾರದರಿಗೆ ಅಹಂಕಾರ ಪಿಶಾಚಿ ಮೆಟ್ಟಿ ಕೊಂಡು ಅದರಾಟವನ್ನು ಪ್ರಾರಂಭಿಸಿತಂತೆ. ತನಗೆ ಸಮನಾದ ಭಕ್ತನು ಯಾರೂ ಇಲ್ಲವೆಂದೇ ನಾರದರು ಎಣಿಸಿದರು. ಹೀಗೆ ನಾರದರ ಮನಸ್ಸಿನಲ್ಲಿ ಮಮತೆಯು ಎಲ್ಲೆಯಿಲ್ಲದೆ ಹೆಚ್ಚಿಕೊಂಡ ವಿಷಯ ಭಗವಂತ ನಿಗೆ ಗೊತ್ತಾಯಿತು.

"ನಾರದರೆ! ನೀವು ಸ್ವಲ್ಪಕಾಲ ಭೂಲೋಕಕ್ಕೆ ಹೋಗಿ ಅಲ್ಲಿ ರುವ ನನ್ನ ಶ್ರೇಷ್ಠ ಭಕ್ತನೊಬ್ಬನನ್ನು ಕಂಡು ಅವನ ಗುಣಾತಿಶಯಗಳನ್ನು ತಿಳಿದುಕೊಂಡು ಬನ್ನಿ. ನಿಮಗೆ ಒಳ್ಳೆಯದಾಗುವುದು" ಎಂದು ಮಹಾ ವಿಷ್ಣು ನಾರದರಿಗೆ ಹೇಳಿದರು.

"ಸರಿ ಭಗವಂತನಾಜ್ಞೆಯಂತೆಯೇ ನಾನು ಹೋಗಿ ಆ ಭಕ್ತನಲ್ಲಿರುವ ವೈಶಿಷ್ಟ್ಯವನ್ನು ತಿಳಿದು ಬರುತ್ತೇನೆ. ನನಗಿಂತಲೂ ದೊಡ್ಡ ಭಕ್ತ ನೊಬ್ಬನು ಈ ಪ್ರಪಂಚದಲ್ಲಿರುವನೆ? ಈ ಆಶ್ಚರ್ಯವನ್ನೂ ನೋಡೋಣ!" ಎಂದೆಣಿಸಿ ನಾರದರು, ಅವನು ಯಾರು, ಎಲ್ಲಿರುವನು ಎಂಬ ವಿಚಾರ ಗಳನ್ನು ತಿಳಿಯುವುದಕ್ಕಾಗಿ ಭೂಲೋಕಕ್ಕೆ ಹೋದರು. ಅಲ್ಲಿ ವಿವರಗಳನ್ನು ತಿಳಿದುಕೊಂಡು ಆ ಭಕ್ತನ ಮನೆಗೆ ಹೋಗಿ ನೋಡಿದರು. ಆತನು ಬೆಳಿಗ್ಗೆ ಎದ್ದೊಡನೆಯೇ "ಹರಿ!' ಎಂದೊಮ್ಮೆ ಉಚ್ಚರಿಸಿ, ನೇಗಿಲನ್ನು ಹಿಡಿದು ಹೊಲಕ್ಕೆ ಹೋದನು. ಇಡೀ ದಿವಸ ಹೊಲವನ್ನುಳುವ ಕೆಲಸದಲ್ಲಿದ್ದು, ಸೂರ್ಯ ಮುಳುಗುವ ಹೊತ್ತಿಗೆ ಮನೆಗೆ ಬಂದನು. ಊಟಮಾಡಿ ಮಲಗುವ ಮುನ್ನ "ಹರಿ!" ಎಂದು ಮತ್ತೊಮ್ಮೆ ಉಚ್ಚರಿಸಿ ಮಲಗಿ ನಿದ್ರಿಸಿದನು.

ಇದನ್ನೆಲ್ಲಾ ನೋಡುತ್ತಿದ್ದ ನಾರದರು "ಇವನು ದೊಡ್ಡ ಭಕ್ತನಂತೆ!" ಎಂದು ಮನಸ್ಸಿನಲ್ಲಿಯೇ ವಿನೋದಗೊಂಡರು. ಮಾರನೆಯ ದಿನವೂ ಭಕ್ತನನ್ನು ಎಡೆಬಿಡದೆ ಹಿಂಬಾಲಿಸುತ್ತಿದ್ದರು. ಆ ದಿನವೂ ಗೃಹಸ್ಥನು ಎದ್ದೊಡನೆ, ಮತ್ತು ಮಲಗುವ ಮುನ್ನ ಹರಿ ಸ್ಮರಣೆಯನ್ನು ಮಾಡುತ್ತಲೂ ಮಿಕ್ಕ ಕಾಲದಲ್ಲಿ ತನ್ನ ಉಳುವ ಕೆಲಸವನ್ನು ಮಾಡುತ್ತಲೂ ಇದ್ದನು. "ಇಷ್ಟು ತಾನೆ!" ಎಂದೆಣಿಸಿ ನಾರದರು ವಿಷ್ಣುಲೋಕಕ್ಕೆ ಹಿಂತಿರುಗಿದರು.

"ತಮ್ಮ ಭಕ್ತನನ್ನು ನೋಡಿ ಬಂದೆ. ಅವನಲ್ಲಿ ಅಷ್ಟೇನೂ ಭಕ್ತಿಯಿರುವುದಾಗಿ ನನಗೆ ಕಾಣಲಿಲ್ಲ. ಇಡೀ ದಿವಸವೆಲ್ಲಾ ಹೊಲವನ್ನು ಉಳುತ್ತಾನೆ. ನನ್ನನ್ನು ಹಾಸ್ಯ ಮಾಡುವ ಸಲುವಾಗಿ ಅವನೆಡೆ ಕಳುಹಿಸಿದಿರಿ, ಅಲ್ಲವೆ?" ಎಂದು ನಾರದರು ಕೇಳಿದರು.

ಮಹಾವಿಷ್ಣು, "ನಾರದರೇ, ಸ್ವಲ್ಪ ತಾಳಿ. ಇಗೋ, ಈ ಬಟ್ಟಲನ್ನು ಹಿಡಿಯಿರಿ" ಎಂದು ಒಂದು ಎಣ್ಣೆ ತುಂಬಿದ ಬಟ್ಟಲನ್ನು ಮುನಿಪುಂಗವರ ಕೈಗೆ ಕೊಟ್ಟರು. ಪುನಃ, "ಈ ಬಟ್ಟಲಲ್ಲಿರವ ಎಣ್ಣೆ ಒಂದು ತೊಟ್ಟೂ ಕೆಳಗೆ ಚೆಲ್ಲದಂತೆ ಹಿಡಿದು ಕೊಂಡು ಭೂಲೋಕವನ್ನು ಒಂದು ಸಲ ಸುತ್ತಿ ಬನ್ನಿ, ಎಂದು ಕಳುಹಿಸಿಕೊಟ್ಟರು.

ಭಗವಂತನಪ್ಪಣೆಯಂತೆ ನಾರದರು ಮಾಡಿದರು. ಒಂದು ತೊಟ್ಟು ಎಣ್ಣೆಯೂ ಕೆಳಗೆ ಚೆಲ್ಲದಂತೆ ಸರ್ವ ಜಾಗ್ರತೆಯಿಂದ ಬಟ್ಟಲನ್ನು ಹಿಡಿದ ವಿಜಯದಿಂದ ಕೆಲಸವನ್ನು ಮುಗಿಸಿ ವಿಷ್ಣುವಿನ ಬಳಿ ಹಿಂತಿರುಗಿ ಹೋದರು. ವಿಷ್ಣು ಅವರನ್ನು ನೋಡಿ,

"ಕೆಲಸವಾಯಿತೆ? ಸಂತೋಷ. ಈಗ ದಯವಿಟ್ಟು ಹೇಳಿ ನೀವು ಭೂಪ್ರದಕ್ಷಿಣೆ ಮಾಡುವಾಗ ಎಷ್ಟಾವರ್ತಿ ನನ್ನನ್ನು ಸ್ಮರಿಸಿದಿರಿ?' ಎಂದು ಕೇಳಿದರು.

"ಸ್ವಾಮಿ! ನಾನು ಹೇಗೆ ತಮ್ಮ ಸ್ಮರಣೆ ಮಾಡುವುದಕ್ಕೆ ಸಾಧ್ಯವಿತ್ತು? ಎಣ್ಣೆ ಬಟ್ಟಲನ್ನು ಹಿಡಿದುಕೊಂಡಲ್ಲವೇ ಪ್ರದಕ್ಷಿಣ ಮಾಡಿದೆ? ಅದೇ ನನ್ನ ಗಮನವನ್ನೆಲ್ಲಾ ಸೆಳೆಯಿತಲ್ಲಾ?" ಎಂದು ನಾರದರು ಹೇಳಿದರು.

"ಮುನಿವರ್ಯರೇ? ಈ ಎಣ್ಣೆ ಬಟ್ಟಲೊಂದೇ ನಿಮ್ಮ ಮನಸ್ಸಿಗೆ ಪೂರ್ತಿ ಕೆಲಸವನ್ನು ಕೊಟ್ಟು, ನನ್ನ ಸ್ಮರಣೆಯನ್ನು ಒಂದಾವರ್ತಿಯಾದರೂ

ಮಾಡದಂತೆ ತಡೆಗಟ್ಟಿತಲ್ಲವೆ? ನಿಮ್ಮಂತಹ ಜ್ಞಾನಿಗಳ ಪಾಡೇ ಇಷ್ಟಾದರೆ ಆ ಬಡಗೃಹಸ್ಥನ ಕಷ್ಟವನ್ನೇನೆಂದು ವರ್ಣಿಸುವುದು? ಸಂಸಾರದ ಕಷ್ಟ ಸುಖಗಳ ಕಡು ಭಾರವನ್ನು ಹೊರಲಾರದೆ ಹೊತ್ತು, ಹಾಗೂ ಪ್ರತಿದಿನವೂ ಎರಡು ಸಲ ನನ್ನ ಸ್ಮರಣೆಯನ್ನು ಅವನು ಮಾಡುತ್ತಾನಲ್ಲವೆ? ಅವನ ಭಕ್ತಿ ಪ್ರಭೆ ಈಗ ನಿಮಗೆ ಗೊತ್ತಾಯಿತೆ?" ಎಂದು ಭಗವಂತನು ಹೇಳಲು, ನಾರದರು ನಾಚಿಕೆಯಿಂದ ತಲೆ ತಗ್ಗಿಸಿದರು.

* * * *

ಗಂಡಸರ ಮತ್ತು ಹೆಂಗಸರ ಆಕರ್ಷಣ ಶಕ್ತಿಗೆ ಸಿಕ್ಕಿ ಮನಸ್ಸು ತತ್ತಳಿಸಿದರೆ ಅಥವಾ ಬೇರೆ ಕಾಮುವಸ್ತುಗಳಲ್ಲಿ ಅದು ಆಸಕ್ತಗೊಂಡರೆ, ಮನಸ್ಸನ್ನು ಪ್ರಯತ್ನ ಪೂರ್ವಕವಾಗಿ ವಶಕ್ಕೆ ತಂದು ಅದನ್ನು ಬೇರೆ ಒಳ್ಳೆಯ ದಾರಿಯಲ್ಲಿ ತಿರುಗಿಸಬೇಕು. ಈ ಪ್ರಯತ್ನ ವಿಫಲವಾದರೆ ಆಗ ಭಗವಂತನಲ್ಲಿ ಮೊರೆಯಿಟ್ಟು, ಆತನನ್ನು ಸ್ನೇಹಿತನಂತೆ, ಇಲ್ಲ ತಂದೆ ಅಥವಾ ತಾಯಂತೆ ಭಾವಿಸಿ, ಆತನ ನಾಮೋಚ್ಚರಣೆಯನ್ನು ಮಾಡಿ, ಪಾಪದಿಂದ ಬಿಡಿಸುವಂತೆ ದೈನ್ಯದಿಂದ ಬೇಡಿಕೊಳ್ಳಬೇಕು. ದೇವಿಯನ್ನು ಸ್ಮರಿಸಿ ಕೊಂಡು ತಾಯೆಂದು ತಿಳಿದು ನಮಸ್ಕರಿಸಬೇಕು. "ರಾಮಾ, ವಾಸು ದೇವಾ, ಗೋವಿಂದಾ!" ಎಂದೆಲ್ಲಾ ಜಪಿಸುವುದು ಎಷ್ಟೋ ಸಹಕಾರಿ ಯಾಗುತ್ತದೆ.

* * * *

ಚಿತ್ತಮಲವನ್ನು ಶುದ್ಧಿಮಾಡಲು ಹರಿನಾಮ ಗಂಗಾವಾರಿಯಂತೆ.

"ದೇವರ ಹೆಸರುಗಳನ್ನು ಹೇಳುವುದರಲ್ಲಿ ನನಗೇನೊ ಸಂತೋಷ ಕಾಣಿಸಲಿಲ್ಲವಲ್ಲಾ!" ಎಂದೊಬ್ಬರು ಹೇಳಿದಾಗ, ಪರಮಹಂಸರು ಹೇಳತ್ತಾರೆ:

"ಅಪ್ಪಾ! ನೀನು ಭಗವಂತನನ್ನು ಕುರಿತು ಈ ರೀತಿಯಲ್ಲಿ ಬೇಡಿಕೊ; 'ನಿನ್ನ ನಾಮಗಳನ್ನು ಜಪಿಸುವುದರಲ್ಲಿ ನನಗೆ ಆನಂದವನ್ನು ಕೊಡು!' ಹೀಗೆ ಅತಿ ದೈನ್ಯದಿಂದ ಕಣ್ಣೀರು ಸುರಿಸಿ ಕೇಳಿಕೊ. ಆಗ ನಿನ್ನ ಪ್ರಾರ್ಥನೆ ಯನ್ನು ದೇವರು ಕರುಣಿಸುವನು. ಅಮ್ಮಾ, ಅಪ್ಪಾ ಕೃಷ್ಣಾ, ರಾಮಾ, ಸೀತಾ, ಗೋಪಾಲಾ, ಗೋವಿಂದಾ, ಮಹಾದೇವಾ, ಈಶ್ವರಾ, ಶಿವ,— ಇವುಗಳಲ್ಲಿ ಯಾವುದಾದರೂ ಸರಿ, ದಿನವೂ ಆ ಹೆಸರನ್ನು ಸ್ಮರಿಸುತ್ತಿರು. ಬರುಬರುತ್ತಾ ಅದರ ರುಚಿಯು ನಿನಗೆ ಅನುಭವವಾಗುವುದು. ರೋಗಿಗೆ

ಮೊಟ್ಟ ಮೊದಲು ಅನ್ನದಲ್ಲಿ ರುಚಿ ಕಾಣುವುದಿಲ್ಲ. ಆದರೆ ಖಾಯಿಲೆ ಗುಣ ವಾದ ಹಾಗೆಲ್ಲಾ ಅನ್ನ ರುಚಿಸುವುದು. ಆ ರುಚಿಯೇ ರೋಗನಿವಾರಣೆಯ ಚಿಹ್ನೆ.''

ಭಗವಂತ ಬೇರೆ, ಅವನ ಹೆಸರು ಬೇರೆ ಎಂದಲ್ಲ. ರುಕ್ಮಿಣಿದೇವಿ ಒಂದು ತುಳಸೀದಳವನ್ನೂ ಕೃಷ್ಣನ ಹೆಸರನ್ನೂ ಇಟ್ಟು ಕೃಷ್ಣನನ್ನು ತಕ್ಕಡಿಗೆ ಹಾಕಲಿಲ್ಲವೆ? ಚೈತನ್ಯ ದೇವರು ಹೇಳಿದಂತೆ, ಭಗವಂತನ ಹೆಸರು ಒಂದು ಫಲವತ್ತಾದ ಬೀಜದ ಹಾಗೆ. ಮನೆಯ ಮಾಳಿಗೆ ಕಟ್ಟೆಯ ಮೇಲೆ ಬಿದ್ದ ಆ ಬೀಜ ಎಷ್ಟೋ ವರ್ಷಗಳು ಹಾಗೆಯೇ ಬಿದ್ದಿರಬಹುದು. ಆದರೆ ಮನೆ ಬಿದ್ದು ಹೋದಾಗ ಬೀಜ ಮಣ್ಣಿಗೆ ಸಿಕ್ಕಿ, ಮಳೆ ಬಿದ್ದೊಡನೆ ಚಿಗುರಿ ಗಿಡವಾಗಿ ಫಲ ಬಿಡುವುದು. ಭಗವನ್ನಾಮ ಫಲವನ್ನು ಕೊಡದೆ ಹೋಗುವುದಿಲ್ಲ.

## ೧೨
## ದೇವೀಕವಚ

ಮರದಲ್ಲಿ ಬೇರಿನಿಂದ ಹಿಡಿದು ತುದಿಯ ರೆಂಬೆಗಳವರೆಗೂ ವ್ಯಾಪಿಸಿ ಕೆಲಸ ಮಾಡುವ ಜೀವರಸ, ಎಲೆ, ಕೊಂಬೆ, ಹೂವು ಮತ್ತು ಕಾಯಾಗಿ ರೂಪುಗೊಳ್ಳುತ್ತದೆ. ಹಾಗೆಯೇ ಎಲ್ಲೆಲ್ಲೂ ವ್ಯಾಪಿಸಿ ಕೆಲಸಮಾಡುವ ಒಂದೇ ಪರವಸ್ತು ಪ್ರಪಂಚದಲ್ಲಿ ಸೃಷ್ಟಿಯಾಗಿರುವ ಅನಂತಕೋಟಿ ರೂಪ ಗಳಾಗಿ ಕಾಣಿಸಿಕೊಳ್ಳುತ್ತದೆ. ಈ ಸೃಷ್ಟಿ ಸ್ಥಿತಿ ಲಯದಲ್ಲಿರುವ ಪರವಸ್ತು ವನ್ನು ನಮ್ಮ ಹಿರಿಯರು ಮಹಾಶಕ್ತಿಯೆಂದೂ, ಮಾಯೆಯೆಂದೂ, ಇನ್ನೂ ಇತರ ಹಲವಾರು ಹೆಸರುಗಳನ್ನಿಟ್ಟೂ ಕರೆಯುವರು. ನಮಗೆ ಕಾಣಿಸುವ ಎಲ್ಲಾ ವಸ್ತುಗಳೂ ಎಲ್ಲಾ ಶಕ್ತಿಗಳೂ ಎಲ್ಲೆಲ್ಲಿಯೂ ವ್ಯಾಪಿಸಿ ನೆಲಸಿರುವ ಪರವಸ್ತುವಿನ ರೂಪಭೇದಗಳೇ ಅಲ್ಲದೆ ಬೇರಲ್ಲ. ಜೀವವನ್ನು ಪಡೆದು ಬೆಳೆದು ನಾಶವಾಗಿ ಮರೆಯಾಗುವ ಜೀವರಾಶಿಗಳೆಲ್ಲಾ ಮಹಾಶಕ್ತಿಯ ವಿಶ್ವರೂಪ. ಏಕವಾಗಿ ನಿಂತ ಪರವಸ್ತು ಸ್ವಂತ ಸಂಕಲ್ಪದಿಂದ ಹಲವಾಗಿ ಪ್ರತ್ಯೇಕವಾಯಿತು. ಈ ಪ್ರತ್ಯೇಕ ವಸ್ತುಗಳು ಎಡೆಬಿಡದೆ ಪುನಃ ಐಕ್ಯ ವಾಗಲು ಪ್ರಯತ್ನಪಡುತ್ತಿವೆ. ನಾವು ನೋಡುವ ಹಲವಾರು ಭೌತಿಕ ಶಾಸ್ತ್ರ ವಿಜ್ಞಾನಿಗಳು ಈ ಶಕ್ತಿಗಳನ್ನು ಶೋಧಿಸಿ ಪ್ರತ್ಯೇಕವಾಗಿ ವಿಂಗಡಿಸಿ

ವಿವರಿಸಿದ್ದಾರೆ. ಭೂಮಿಯಿಂದಗಲಿ ಹೋದ ವಸ್ತುಗಳನ್ನು ಭೂಮಿ ಎಳೆಯು ತ್ತಿರುವುದೂ, ಎಣಿಕೆಯಿಲ್ಲದ ಗೋಳಗಳು ಬ್ರಹ್ಮಾಂಡದಲ್ಲಿ ವಿಶ್ವದ ಆಕರ್ಷಣ ಶಕ್ತಿಗೆ ಒಳಗಾಗಿ ಎಡಬಿಡದೆ ಸುತ್ತುತ್ತಿರುವುದೂ,—ಇವೆಲ್ಲಾ ಪರಾಶಕ್ತಿಯ ಲೀಲೆಗಳೆ. ವಿಶ್ವದ ಈ ಆಕರ್ಷಣ ಶಕ್ತಿ ಹೇಗೆ ಕೆಲಸ ಮಾಡುತ್ತದೆ, ಇದರ ರಹಸ್ಯವೇನು ಎಂಬೀ ವಿಷಯಗಳನ್ನೆಲ್ಲಾ ವಿಜ್ಞಾನಿ ಗಳು ಪರಿಶೋಧಿಸಿ ವಿವರಿಸಿರುವರು. ಇದು ಖಗೋಳಶಾಸ್ತ್ರದ ಒಂದು ಮುಖ್ಯಭಾಗ. ಆದರೆ ಆ ಶಕ್ತಿಯೂ, ಅದರ ನಿಯಮವೂ, ಅದು ಯಾವ ಮೂಲಕಾರಣದ ಪ್ರಕಾಶವೆಂಬುದೂ ವಿಜ್ಞಾನಿಗಳ ಪರಿಶೋಧನೆಗೆ ಅಡ ಗುವ ವಿಷಯಗಳಲ್ಲ. ಮಹಾಶಕ್ತಿ, ಮಾಧವಿ, ದುರ್ಗೆ, ದೇವಿ ಎಂದು ಶ್ರೀರಾಮಕೃಷ್ಣರು ಹೃದಯವನ್ನು ಕರಗಿಸುವಂತಹ ಅಂತರ್ಯ ಪ್ರೇಮ ಭಕ್ತಿಗಳಿಂದ ಪರವಶರಾಗಿ ಪೂಜಿಸಿ ಆರಾಧಿಸಿದ ಪರವಸ್ತು ಅದು. ಶ್ರೀ ಶಂಕರರು ಅನೇಕ ಸಾವಿರ ನಾಮಗಳನ್ನಿಟ್ಟು ಅರ್ಚಿಸಿದ್ದೂ ಆ ಮಹಾ ಶಕ್ತಿಯನ್ನೇ.

ಈ ಮೂಲಶಕ್ತಿಯ ರೂಪಭೇದಗಳಾದ ಇತರ ಅನೇಕ ಆಕರ್ಷಣ ಶಕ್ತಿಗಳಲ್ಲಿ ಸ್ತ್ರೀ ಪುರುಷರ ಪರಸ್ಪರ ಆಕರ್ಷಣೆಯೂ ಒಂದು. ಇದು ಜನ ರನ್ನು ಬಹಳವಾಗಿ ಕಾಡಿಸುತ್ತದೆ ಎಂಬುದು ಸಕಲರಿಗೂ ತಿಳಿದ ವಿಷಯ. ಪರಾಶಕ್ತಿಯ ಪ್ರಸಾದವಾದ ಈ ಸ್ವಭಾವಸಿದ್ಧವಾದ ಆಕರ್ಷಣೆ ಅನೇಕವೇಳೆ ಜನರಿಗೆ ವಿವರಿಸಲಾರದ ಆನಂದ ಸಂತೋಷಗಳನ್ನೂ ತರುತ್ತದೆ. ಅವರ ಜೊತೆಗೆ ಸಹಿಸಲಾರದಷ್ಟು ದುಃಖವನ್ನೂ ಕೊಡುತ್ತದೆ. ಈ ಸಂಸಾರದ ಬಾಳೂ ಅದರಲ್ಲಿ ಕಾಣಿಸಿಕೊಂಡು ಬೆಳೆಯುವ ಸಂತೋಷ ಪ್ರೇಮಗಳೂ ಈ ಆಕರ್ಷಣ ಶಕ್ತಿಯಿಂದುಂಟಾಗುವ ಫಲಗಳೇ. ಹಲವಾರು ಕಷ್ಟಗಳಿಗೂ ದುಃಖ ಮತ್ತು ಪಾಪಗಳಿಗೂ ಕೂಡ ಇದೇ ಮೂಲಸ್ಥಾನವಾಗುತ್ತದೆ. ಅಪಾರ ಶಕ್ತಿಯುಳ್ಳ ಈ ಆಕರ್ಷಣೆಗೆ "ಪಶುತ್ವ" ಅಥವಾ "ಪಶುಧರ್ಮ" ವೆಂಬುದೂ ಒಂದು ಹಳೆಯಕಾಲದ ಹೆಸರು. ಇದು ಎಲ್ಲಾ ಜೀವರಾಶಿ ಗಳಿಗೂ ಸ್ವಭಾವ ಸಿದ್ಧವಾದುದು. ಇದನ್ನು ಅಲ್ಲಗಳೆಯುವುದರಲ್ಲಿ ಏನೂ ಪ್ರಯೋಜನವಿಲ್ಲ. ಈ ಶಕ್ತಿಯನ್ನು ಕೆಟ್ಟ ಮಾರ್ಗದಲ್ಲಿ ಉಪಯೋಗಿಸವೆ ಧರ್ಮನಿಯಮಗಳಿಗೊಳಪಡಿಸಿ ಪ್ರಯೋಗಿಸಬೇಕೆಂಬುದೇ ನಮ್ಮ ಹಿರಿಯರ ಸದುಪದೇಶ. ಸ್ತ್ರೀ ಪುರುಷರ ಪರಸ್ಪರ ಪ್ರೇಮ ಪವಿತ್ರಮಾರ್ಗದಲ್ಲಿ ನೆಲಸುವಸಲುವಾಗಿಯೇ ಸಾಧಾರಣ ಜನರಿಗೆ ಸಮಾಜ ಏರ್ಪಡಿಸಿರುವ

ಸಂಸಾರದ ಬಾಳೂ, ಹೆಂಡತಿ ಮಕ್ಕಳ ಪ್ರೀತಿ ವಿಶ್ವಾಸಗಳೂ ಶ್ರೇಷ್ಠ ಸಾಧನ ಗಳಾಗಿ ನಿಂತಿವೆ. ಈ ಮಾರ್ಗವನ್ನು ಬಿಟ್ಟು ದುರ್ಮಾರ್ಗದಲ್ಲಿ ಜನರು ತಮ್ಮ ಪಶುಧರ್ಮವನ್ನಾಚರಿಸಿದರೆ ಅವರಿಗೆ ದುಃಖ ಕೇಡುಗಳುಂಟಾಗು ವುದರಲ್ಲಿ ಸಂದೇಹವಿಲ್ಲ.

ಕೆಲವು ಮಹಾತ್ಮರು ಸಹಜವಾದ ಈ ಆಕರ್ಷಣ ಶಕ್ತಿಯನ್ನು ಸಂಪೂರ್ಣವಾಗಿ ಜಯಿಸಿ ಅದನ್ನು ಆತ್ಮಶಕ್ತಿಯನ್ನಾಗಿ ಬದಲಾಯಿಸಿ ಕೊಂಡು ಬ್ರಹ್ಮಚರ್ಯದಲ್ಲಿ ನೆಲೆಸುತ್ತಾರೆ. ಮಹಾಶಕ್ತಿಯ ಕೃಪೆಯಿಂದ ಅವರ ಪಶುಧರ್ಮ ಶಕ್ತಿಯೆಲ್ಲಾ ದೇಹ ಮನಸ್ಸುಗಳೆರಡಕ್ಕೂ ಸಾರಶಕ್ತಿ ಗಳನ್ನುಂಟುಮಾಡುವ ಸಾಧನೆಯಾಗಿ ಪರಿಣಮಿಸಿ ಅವರನ್ನು ಉನ್ನತ ಸ್ಥಿತಿಗೇರಿಸುತ್ತದೆ. ನಾವು ಈ ಶಕ್ತಿಯನ್ನು ಪೂರ್ಣವಾಗಿ ಅಡಗಿಸಲು ಅಥವಾ ಬದಲಾಯಿಸಲೂ ಸಾಧ್ಯವಿಲ್ಲದಿದ್ದರೂ ಈ ಸಾಧನೆಯಲ್ಲಿ ನಾವು ಎಷ್ಟರಮಟ್ಟಿಗೆ ವಿಜಯಗಳಾಗುತ್ತವೆಯೋ ಅದಕ್ಕನುಗುಣವಾಗಿ ಆತ್ಮಶಕ್ತಿ ಯನ್ನೂ ಬುದ್ಧಿ ವಿಕಾಸವನ್ನೂ ಪಡೆಯುತ್ತೇವೆ.

* * * *

ತಮಿಳು ಜನರಾದ ನಾವು ಒಳ್ಳೆಯ ಸಹಜ ಮತ್ತು ಸಾಮಾಜಿಕಗುಣ ಶೀಲಗಳನ್ನು ಆಜನ್ಮ ಹಕ್ಕುಗಳನ್ನಾಗಿ ಪಡೆದಿದ್ದೇವೆ. ವಂಶಪಾರಂಪರ್ಯ ವಾಗಿ ಬಂದ ತೀಕ್ಷ್ಣವಾದ ಬುದ್ಧಿ, ನಗೆ, ಸಂತೋಷದ ಸ್ವಭಾವ ನಮ್ಮದು. ತಮಿಳರ ಹೃದಯ ಸಂವೇದನೆಗಳು ಮಿತಿಮೀರದೆ ಯಾವಾ ಗಲೂ ವಿನಯ ಶಾಂತರೂಪಗಳಲ್ಲಿಯೇ ವಿಕಾಸಗೊಳ್ಳುತ್ತವೆ. ಇಷ್ಟೊಂದು ಒಳ್ಳೆಯ ಗುಣಗಳ ನಡುವೆ ಪಶುಧರ್ಮದ ಆಕರ್ಷಣ ಶಕ್ತಿ ಎಲ್ಲವನ್ನೂ ಹಾಳುಮಾಡಬಲ್ಲ ಅಪಾಯವಾಗಿ ನಿಂತಿದೆ. ಮನುಷ್ಯರಿಗೂ ಮೃಗ ಪಕ್ಷಿ ಗಳಿಗೂ ಸಾಮಾನ್ಯವಾದೀ ಶಕ್ತಿಯನ್ನು ಅಡಗಿಸಿ ಆಳದಿದ್ದರೆ ಇದು ಭಯಂಕರವಾದ ಪಿಶಾಚಿಯಾಗಿ ಪರಿಣಮಿಸುತ್ತದೆ. ಈ ಪಿಶಾಚಿ ವಸ್ತು ಗಳ ತಾರತಮ್ಯವನ್ನು ತಿಳಿಯಪಡಿಸುವ ವಿವೇಕವನ್ನು ಕೆಡಿಸಿ ನಾಶಮಾಡಿ ವ್ಯಕ್ತಿಯನ್ನೂ ಸಮಾಜ ಶೀಲವನ್ನೂ ಸಹ ನಾಶಮಾಡುತ್ತದೆ. ಹೀಗಾಗ ದಂತೆ ನಾವು ಸರ್ವಜಾಗ್ರತೆಯಿಂದ ನಮ್ಮನ್ನು ರಕ್ಷಿಸಿಕೊಳ್ಳಬೇಕು. ಇಲ್ಲ ದಿದ್ದರೆ ನಮ್ಮ ಸಮಾಜದ ಅತ್ಯಂತ ಒಳ್ಳೆಯ ಸ್ವಭಾವ ಶೀಲಗಳೆಲ್ಲಾ ಈ ಪಿಶಾಚಿಗೆ ಬಲಿಯಾಗಿ ನಾಶ ಹೊಂದುತ್ತವೆ. ಹೆಣ್ಣು ಮಕ್ಕಳು ಸಹಾಯ ವಿಲ್ಲದೆ ಬೀದಿಯಲ್ಲಿ ತಿರುಗಾಡುವ, ಅಂಗಡಿ ಮತ್ತಿತರ ಕಡೆಗಳಿಗೆ ಭಯ

ವಿಲ್ಲದೆ ಒಬ್ಬೊಂಟಿಗರಾಗಿ ಹೋಗಿ ಬರುವ, ಸ್ಥಿತಿ ಉಂಟಾದರೆ ಮಾತ್ರ ಆ ಸಮಾಜ ಉತ್ತಮವಾದುದೆಂದು ಗಣಿಸಲ್ಪಡುತ್ತದೆ. ಉನ್ನತಿಯನ್ನು ಪಡೆದ ನಾಗರಿಕತೆಗೆ ಇದೇ ಪ್ರಮಾಣ. ಬಾಳ್ವಿಯ ಸುಖಕ್ಕೂ ಇದು ಅತ್ಯಾವಶ್ಯಕವಾದ ಪರಿಸ್ಥಿತಿ. ನಮ್ಮ ಮದರಾಸಿನ ಬೀದಿಗಳಲ್ಲಿ ಎಲ್ಲಾ ವಿಧವಾದ ನಾಗರಿಕತೆಗಳನ್ನೂ ನೋಡುತ್ತೇವೆ. ಹಿಂದಿನ ಮತ್ತು ಇಂದಿನ ಜನರನ್ನು ಹೋಲಿಸಿ ನೋಡಿದರೆ ಈಗಿನವರು,—ಹೆಂಗಸರು, ಗಂಡಸರು, ಮತ್ತು ಎಲ್ಲಾ ಜಾತಿಯವರೂ ಕೂಡ—ಹೆಚ್ಚು ಶುಭ್ರವಾಗಿಯೂ ಒಳ್ಳೆಯ ವಸ್ತ್ರಗಳನ್ನು ಧರಿಸುತ್ತಲೂ ಇರುವರು. ಆದರೂ ಗಂಡಸರ ನಡೆ ಭಾವನೆಗಳನ್ನು ನೋಡಿದರೆ ಪಶುಧರ್ಮ ಸರಿಯಾಗಿ ಹತೋಟಿಯಲ್ಲಿ ನಿಂತು ನಿಗ್ರಹಿಸಲ್ಪಡುತ್ತಿದೆಯೇ ಎಂಬುದು ಸಂದೇಹವಾಗಿಯೇ ಇದೆ. ಗಂಡಸರನ್ನು ಕಂಡರೆ ಹೆಂಗಸರು ಸಂಕೋಚಪಡುವುದು ಸ್ವಭಾವ ಸಿದ್ಧ. ಆದರೆ ಸಂಕೋಚ ಬೇರೆ, ಭಯ ಬೇರೆ. ಅಪರಿಚಿತರಾದ ಅನ್ಯಪುರುಷರನ್ನು ಕುರಿತು ಅದೇ ದೇಶದಲ್ಲಿ ಹುಟ್ಟಿ ಬೆಳೆದ ಹೆಣ್ಣು ಮಕ್ಕಳು ಏಕೆ ಭಯಪಡಬೇಕು? ಗಂಡಸರ ಮನಸ್ಸೂ ಭಾವಗಳೂ ಸಿದ್ಧವಾಗಿದ್ದರೆ ಹೆಂಗಸರ ಮನಸ್ಸಿನಲ್ಲಿ ಭಯವುಂಟಾಗುವುದಿಲ್ಲ. ಮುಖದಲ್ಲಿಯೂ ಕಣ್ಣಿನ ದೃಷ್ಟಿಯಲ್ಲಿಯೂ ಮನೋಭಾವಗಳು ಹೊರಬೀಳುತ್ತವೆ. ಪುರುಷರ ಮುಖಚೇಷ್ಟೆ ಮತ್ತು ಕಣ್ಣಿನ ನೋಟಗಳಲ್ಲಿ ಕಾಣಬರುವ ಕುರುಹುಗಳನ್ನು ಕಂಡ ಮಾತ್ರವೇ ನಮ್ಮ ಸಹೋದರಿಯರು ಅಂಜಿಕೆಪಡುತ್ತಾರೆ. ಪುರುಷರನ್ನು ನೋಡಿ ಸ್ತ್ರೀಯರು ಭಯಪಡುವ ಈ ಸಮಾಜವನ್ನು ಏನೆಂದು ಗಣನೆ ಮಾಡುವುದು? ಪಶುಧರ್ಮ ಶಕ್ತಿಯನ್ನು ಜನರು ಬೇಲಿ ಹಾಕಿ ಕಾವಲು ಕಾಯ್ದು ಸರಿಯಾದ ಹತೋಟಿಯಲ್ಲಿಟ್ಟ ಹೊರತು ನಮ್ಮ ಸಮಾಜದ ಗುಣಶೀಲ ಸರಿಯಾಗಿ ಮುಂದುವರೆದಿಲ್ಲವೆಂದೇ ಭಾವಿಸಬೇಕಾಗುತ್ತದೆ. ಹೀಗೆಲ್ಲಾ ಬರೆಯುತ್ತೇನಲ್ಲಾ ಎಂದು ಕೋಪಿಸಿಕೊಳ್ಳಬೇಡಿ.

* * * *

ಯಾವ ಸ್ತ್ರೀಯನ್ನು ಕಂಡರೂ, ಈಕೆ ದೇವಿಯ ಅವತಾರವೆಂದು ಶ್ರೀರಾಮಕೃಷ್ಣರು ಎಣಿಸಿದರು. ಹಾಗೆಯೇ ನಾವೂ ಸ್ತ್ರೀಯರನ್ನು ಮರ್ಯಾದೆ ಗೌರವಗಳಿಂದ ನೋಡಬೇಕು. ಈ ಭಾವನೆಯನ್ನೇ ಅಭ್ಯಾಸ ಮಾಡಿ ಸ್ಥಿರಗೊಳಿಸಿದರೆ ಪಶುಧರ್ಮ ಪಿಶಾಚಿ ಸೊಲ್ಲಡಗಿ ನಾಶವಾಗುತ್ತದೆ. ಸಕಲರೂ ಅರಿತಹಾಗೆ ಸೂಳೆಯರಾಗಿ ಜೀವಿಸುತ್ತಿದ್ದ ಹೆಂಗಸರನ್ನೂ

ಭಗವಾನ್ ಶ್ರೀರಾಮಕೃಷ್ಣರು ದುರ್ಗಾದೇವಿಯ ಅಂಶಗಳಾಗಿಯೇ ಕಂಡರು. ವೇಶ್ಯಾಸ್ತ್ರೀಯನ್ನು ನೋಡಿದಾಗಲೂ ಮಗುವಿಗೆ ತಾಯಲ್ಲಿರುವ ವಿಶ್ವಾಸ ಗೌರವಗಳೇ ಅವರ ಮನಸ್ಸಿನಲ್ಲಿ ತೋರಬರುತ್ತಿದ್ದವು. ನಮ್ಮ ಮನಸ್ಸಿನಲ್ಲಿ ಪಶುತ್ವದ ಚೇಷ್ಟೆಯನ್ನು ಸಂಪೂರ್ಣವಾಗಿ ಅಡಗಿಸಬೇಕಾದರೆ ನಾವು ಶ್ರೀರಾಮಕೃಷ್ಣರು ಉಪದೇಶಿಸಿದ ಈ ಮಂತ್ರವನ್ನು ಕೈಗೊಂಡು ಸದಾ ಪ್ರಯೋಗಿಸಬೇಕು. ಅಭ್ಯಾಸದಿಂದ ಆಗದಿರುವ ಕೆಲಸವೇ ಇಲ್ಲ. ಸೀತೆ, ಪಾರ್ವತಿ, ಲಕ್ಷ್ಮಿ, ಗೌರಿ, ಈಶ್ವರಿ, ಅಮ್ಮ,—ಇವೆಲ್ಲಾ ದೇವಿಯ ನಾಮಗಳು ಸ್ತ್ರೀರೂಪವನ್ನು ಕಂಡೊಡನೆ ಶ್ರೀರಾಮಕೃಷ್ಣರನ್ನು ಧ್ಯಾನಿಸಿ ದೇವಿಯ ನಾಮಗಳನ್ನು ನಾಲಿಗೆಯಲ್ಲೂ ಮನಸ್ಸಿನಲ್ಲೂ ಧರಿಸಿ, "ಈಕೆ ದೇವಿ, ಪರಾಶಕ್ತಿಯ ಅವತಾರ, ಈಕೆಯನ್ನು ಮನಸ್ಸಿನಲ್ಲೆ ನಮಸ್ಕರಿಸುತ್ತೇನೆ" ಎಂದು ನಮ್ಮ ಸಮಾಜ ಮತ್ತು ನಮ್ಮ ಆತ್ಮೋದ್ಧಾರಕ್ಕಾಗಿ ಸ್ತ್ರೀಯನ್ನು ಗೌರವಿಸಿ ಸೇವಿಸಬೇಕು. ಪವಿತ್ರ ಬಾಳಿಗೂ ಉತ್ತಮವಾದ ಗುಣಶೀಲಗಳಿಗೂ ಅತ್ಯಂತ ಮುಖ್ಯ ಸಾಧನೆಯಾಗಿರುವ ಈ ದೇವೀ ಕವಚವನ್ನು ಶ್ರೀರಾಮಕೃಷ್ಣರು ನಮಗೆ ಕೊಟ್ಟಿರುವರು. ಇದನ್ನು ನಾವು ಪ್ರಯೋಜನಕಾರಿಯನ್ನಾಗಿ ಮಾಡಿಕೊಳ್ಳಬೇಕಾದುದು ನಮ್ಮ ಕರ್ತವ್ಯ.

* * * *

ಪಾಠಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡುವ ವಿದ್ಯಾರ್ಥಿಗಳೇ! ನಿಮ್ಮ ಯೋಗ್ಯಸಾಧನೆಗಳಲ್ಲೊಂದಾಗಿ ಇದನ್ನೂ ಸೇರಿಸಿಕೊಳ್ಳಿ. ನಿಮಗೆ ಮನಸ್ಸಿನ ಶಿಸ್ತು ಬಹಳ ಮುಖ್ಯ. ಶಿಸ್ತು ಎಂದರೆ ದೇಹವನ್ನೂ ವಸ್ತ್ರಗಳನ್ನೂ ಶುಭ್ರವಾಗಿಟ್ಟುಕೊಳ್ಳುವುದು ಮಾತ್ರವಲ್ಲ. ಎಲ್ಲಾ ವಿದ್ಯಾಭ್ಯಾಸಕ್ಕಿಂತಲೂ ಮುಖ್ಯವಾದ ಶಿಕ್ಷಣ ಯಾವುದೆಂದರೆ, ಮನಸ್ಸಿನಲ್ಲಿ ಪಶುಧರ್ಮದ ಆಕರ್ಷಣ ಶಕ್ತಿ ಸೇರಿಕೊಳ್ಳದಂತೆ ಮನಸ್ಸನ್ನು ಶುಭ್ರವಾಗಿಟ್ಟುಕೊಳ್ಳುವುದು. ಪಶುಧರ್ಮ ಚಹರೆಗಳನ್ನು ತೋರಿಸುವ ಹೊಲಸು ಚಿತ್ರಗಳೂ ಕಥೆ ಪುಸ್ತಕಗಳೂ ನಮ್ಮ ಸಾಮಾಜಿಕ ಶೀಲವನ್ನು ನಾಶಪಡಿಸುತ್ತಿವೆ. ಹಣ ಸಂಪಾದನೆಗಾಗಿ ಪಶುಧರ್ಮ ಶಕ್ತಿಯನ್ನೇ ಮೂಲಧನವನ್ನಾಗಿಟ್ಟುಕೊಂಡು ಸುಳ್ಳನ್ನು ಸತ್ಯವೆಂದು ತೋರಿಸುವ ಜನರಿಗೆ ಸಮಾಜದಲ್ಲಿ ಜಾಸ್ತಿ ಅಧಿಕಾರ ಸಲಿಗೆಗಳು ದೊರೆತಿವೆ. ನಮ್ಮ ಬಾಲಕಬಾಲಕಿಯರು ಎಲ್ಲದರಲ್ಲೂ ಅತ್ಯುತ್ತಮ ಸ್ವಭಾವವನ್ನು ಪಡೆದವರು. ಏನೂ ಅರಿಯದ ಈ ಸಣ್ಣ ಮಕ್ಕಳ ಶುಭ್ರ ಮನಸ್ಸಿನಲ್ಲಿ ಪಶುಧರ್ಮ ಉತ್ತೇಜಗೊಂಡು ಅವರ ಜೀವನ

ವನ್ನು ಹಾಳುಮಾಡಿ ಪಾಪದ ಗುಂಡಿಗೆ ತಳ್ಳಿ ಸಮಾಜವನ್ನು ನಾಶಮಾಡು ವುದಕ್ಕೆ ನಾವು ಬಿಡಬಹುದೆ? ಪರಾಶಕ್ತಿಯನ್ನು ಸತತ ಪೂಜಿಸಿ ಸಂಸಾರದ ಬಾಳನ್ನು ಉನ್ನತಿಗೊಳಿಸಿ, ನಮ್ಮೀ ನಾಡಿನಲ್ಲಿ ಯಾವ ಬಾಲಕಿಯಾದರೂ ಯಾವ ವೇಳೆಯಲ್ಲಾದರೂ ಎಲ್ಲಿಗಾದರೂ ಕೂಡ ಧೈರ್ಯವಾಗಿ ಹೋಗ ಬಹುದು, ಯಾವ ಬಾಲಕನೂ ಅವಳಿಗೆ ಅಣ್ಣ ಮತ್ತು ಸಂರಕ್ಷಕ, ಎಂಬ ನಮ್ಮ ಆಶೆಯನ್ನು ಸತ್ಯವನ್ನಾಗಿ ಮಾಡಿ ಆಚರಣೆಗೆ ತರಬೇಕಾದುದೇ ನಮ್ಮ ಧರ್ಮ. ಶೀಲಕ್ಕೆ ಜಯವಾಗಲಿ! ಮಕ್ಕಳ ಬಾಳು ಬೆಳಗಲಿ!

೧೩

## ನೀರಿನ ಮೇಲೆ ದೋಣಿ

ನೀರಿನ ಮೇಲೆ ದೋಣಿ ತೇಲಿ ಹೋಗುತ್ತದೆ. ಆದರೆ ನೀರು ದೋಣಿ ಯೊಳಗೆ ಬರಲಾಗದು. ಬಂದರೆ ದೋಣಿ ಮುಳುಗಿ ಹೋಗುತ್ತದೆ. ಈ ಜಗತ್ತಿನ ಸಂಸಾರ ಸಮುದ್ರದಲ್ಲಿ ಹೋಗುತ್ತಿರುವ ಭಕ್ತರ ಬಾಳೂ ಹೀಗೆ. ಸಂಸಾರದಲ್ಲಿ ಮುಂದುವರಿಯಲು ಮಾಡಬೇಕಾದ ಕೆಲಸಗಳನ್ನೆಲ್ಲಾ ಮಾಡ ಬಹುದು. ಸಂಸಾರದ ಸುಖ ದುಃಖಗಳು ಮನಸ್ಸಿನೊಳಗೆ ನುಗ್ಗುವಂತೆ ಬಿಡಬಾರದು. ಹಾಗೆ ಅವು ಸ್ವೇಚ್ಛೆಯಾಗಿ ಒಳನುಗ್ಗಿದರೆ ಜೀವನ ದೋಣಿ ಮುಳುಗಿ ಹೋಗುವುದು.

ಸಂಸಾರದಲ್ಲಿ ಬಾಳಿ. ಆದರೆ ಒಂದು ಕೈಯಿಂದ ಬಾಳಿನ ಕರ್ತವ್ಯ ಗಳನ್ನು ಮಾಡುತ್ತಲೂ ಮತ್ತೊಂದು ಕೈಯಿಂದ ಭಗವಂತನ ಪಾದಾರವಿಂದ ಗಳನ್ನು ಹಿಡಿದುಕೊಂಡೂ ಇರಬೇಕು. ಕೆಲಸ ಮಾಡದಿದ್ದ ಸಮಯದಲ್ಲಿ ಎರಡು ಕೈಗಳಿಂದಲೂ ದೇವರ ಚರಣಕಮಲಗಳನ್ನು ಭದ್ರವಾಗಿ ಹಿಡಿದು ಕೊಳ್ಳಬೇಕು.

ಉತ್ತಮ ದಾದಿಯಾದವಳು ತನ್ನ ಯಜಮಾನಿಯ ಮಗುವನ್ನು ಆದರದಿಂದೆತ್ತಿಕೊಂಡು ಮೊಲೆಯುಣಿಸಿ ಬೆಳೆಸುತ್ತಾಳೆ. ಹೆತ್ತ ತಾಯಿಯ ಹಾಗೆಯೇ ಹಾಲುಕೊಟ್ಟು ಪ್ರೀತಿಯಿಂದ ಸಾಕಿಸಲಹಿದರೂ, ಅವಳು ಮನಸ್ಸಿನಲ್ಲಿ "ಈ ಮಗುವಿನಿಂದ ನನಗೇನೂ ಆಗಬೇಕಾದ್ದಿಲ್ಲ; ಇದು ನನ್ನ ದಲ್ಲ. ನಮ್ಮಿಬ್ಬರ ಸಂಬಂಧ ಹಾಲುಣಿಸಿ ಬೆಳಸುವುದರಲ್ಲಿ ಮಾತ್ರ"

ಎಂದು ತಿಳಿದು ತನ್ನ ಕರ್ತವ್ಯವನ್ನು ಮಾಡುತ್ತಾಳೆ. ಭಕ್ತರೂ ಕೂಡ ಈ ಭಾವನೆಯ ತಳಹದಿಯಲ್ಲೇ ಸಂಸಾರವನ್ನು ದೇವರಿಗೆ ಮಾಡುವ ಸೇವೆ ಯೆಂದು ಎಣಿಸಿ ನಡೆಸಬೇಕು.

ಶ್ರೀರಾಮಕೃಷ್ಣರು ಹೇಳುತ್ತಾರೆ:

"ಒಂದು ಮನೆಯಲ್ಲಿ ಕೆಲಸಮಾಡುವವಳು 'ಇದು ನಮ್ಮ ಮನೆ' ಯೆಂದು ಹೇಳುವುದರಲ್ಲಿ ಅರ್ಥವಿದೆಯೆ? ಅವಳ ಸ್ವಂತ ಮನೆ ಯಾವುದೋ ಗ್ರಾಮದಲ್ಲಿದೆ. ಪಟ್ಟಣದಲ್ಲಿ ಇವಳು ಕೆಲಸ ಮಾಡಿ ಜೀವಿಸುತ್ತಾಳೆ. ಕೆಲಸ ಮಾಡುವ ಮನೆಯನ್ನು 'ನಮ್ಮ ಮನೆ' ಎನ್ನುತ್ತಾಳೆ. ಯಜಮಾನಿಯ ಮಗುವನ್ನು ಎತ್ತಿಕೊಂಡು 'ನನ್ನ ಮುದ್ದುಮಗು!' ಎಂದು ಮುದ್ದಾಡು ತ್ತಾಳೆ, 'ನಮ್ಮ ಗೋಪಾಲ ಬಹಳ ತುಂಟ'—'ನಮ್ಮ ಗೋಪಾಲನಿಗೆ ಪಾಪ, ಬಹಳ ಹಸಿವಾಗುತ್ತಿದೆ!' ಎಂದೆಲ್ಲಾ ಮಗುವನ್ನು ಕುರಿತು ಲಾಲಿಸಿ ಮಾತಾಡುತ್ತಾಳೆ. ಆದರೆ ಈ ಮಾತುಗಳಾಡುತ್ತಿರುವಾಗಲೂ ಅವಳು 'ಇದು ನನ್ನ ಮಗುವಲ್ಲ, ನನ್ನ ಮಗು ಗ್ರಾಮದಲ್ಲಿ ಅದರಜ್ಜಿಯ ಬಳಿ ಬೆಳೆಯುತ್ತಿರುವುದು' ಎಂಬ ವಿಷಯವನ್ನು ಮರೆಯುವುದಿಲ್ಲ. ಹಾಗೆಯೇ, ನನ್ನ ಗೃಹಸ್ಥ ಶಿಷ್ಯರೇ! ನೀವುಗಳೂ ಕೂಡ 'ಸೇವಕ' ಭಾವದಲ್ಲಿ ಸಂಸಾರ ವನ್ನು ನಡಸಿ ಮುಂದುವರಿಯಬೇಕು."

* * * *

ನಿಮ್ಮ ಮನೆಯೇ ದೇವರ ವಾಸಸ್ಥಳ, ಭಗವಂತನೇ ಮನೆಯ ಯಜ ಮಾನ, ಎಂಬ ಭಾವನೆಯನ್ನು ಅಭ್ಯಾಸಮಾಡುತ್ತಾ ಜೀವನವನ್ನು ನಡೆಸಿ. ಅಭ್ಯಾಸ ಸ್ಥಿರಪಟ್ಟೊಡನೆ ಅದೇ ಮನಸ್ಸಿನ ಮೂಲಸ್ವಭಾವವಾಗುತ್ತದೆ. ಸಂಸಾರದಲ್ಲಿದ್ದ ಹಾಗೆಯೇ ಭಗವಂತನನ್ನು ಸಾಧಿಸುವುದಕ್ಕೆ ಪ್ರಯತ್ನ ಪಡುವ ಭಕ್ತರು, ಕೋಟೆಯೊಳಗೆ ನಿಂತು ಹೋರಾಡುವ ಸಿಪಾಯಿಗಳ ಹಾಗೆ. ಸನ್ಯಾಸವನ್ನು ಕೈಗೊಂಡು ದೇವರನ್ನು ಪೂಜಿಸುವವರೋ, ಮೈದಾನದ ಬಯಲಿನಲ್ಲಿ ನಿಂತು ಎಲ್ಲಕಡೆಯೂ ಅಪಾಯವನ್ನೆದುರಿಸಿ ಯುದ್ಧಮಾಡುವ ನಿರ್ಭಯ ವೀರರನ್ನು ಹೋಲುವರು. ಎರಡು ಪಂಗಡ ದವರೂ ವೀರಸಾಹಸಿಗಳೆ. ಕೋಟೆಯೊಳಗೆ ಸೇರಿಕೊಂಡು ಸುರಕ್ಷಿತವಾಗಿ ಊರನ್ನು ಕಾಯ್ದು ಕಾಪಾಡುವ ಸಿಪಾಯಿಗಳು ಅನೇಕ ವಿಧ ಅನುಕೂಲ ಬೆಂಬಲಗಳನ್ನು ಪಡೆದು ಉಪಯೋಗಿಸಿಕೊಂಡು ಯುದ್ಧಮಾಡುತ್ತಾರೆ. ಇದರಲ್ಲೇನೂ ತಪ್ಪಿಲ್ಲ.

ಮೈದಾನದಲ್ಲಿ ನಿಂತು ಶತೃಗಳನ್ನು ಎದುರಿಸುವುದಕ್ಕೆ ಮೊದಲು ಸೈನಿಕರು ಪ್ರತ್ಯೇಕ ಶಿಕ್ಷಣವನ್ನು ಪಡೆಯುವುದನ್ನು ನೋಡಿದ್ದೀರಲ್ಲವೆ? ಹಾಗೆಯೇ ಸಂಸಾರವೂ ವೈರಾಗ್ಯವನ್ನು ಅಭ್ಯಾಸಮಾಡುವ ಸಾಧನವೆಂದು ತಿಳಿಯಿರಿ. ಕೆಲವು ಸುಖಸೌಕರ್ಯಗಳನ್ನು ಬೆಂಬಲವಾಗಿ ಹಿಡಿದು ಸನ್ಯಾಸ ಧರ್ಮದಲ್ಲಿ ನಮ್ಮನ್ನು ತರಬೇತು ಮಾಡಿಕೊಳ್ಳುವುದೇ ಸಂಸಾರದ ಶ್ರೇಷ್ಠ ಸಾಧನ. ಮನಸ್ಸನ್ನು ಪಳಗಿಸಿ ಪಕ್ವಮಾಡಲು ಸಂಸಾರದ ಬಾಳನ್ನೊಂದು ಶಿಕ್ಷಣ ಕೇಂದ್ರವೆಂದೆಣಿಸಿ ಜೀವನವನ್ನು ಸಾಗಿಸಿ.

ಅಪ್ಪನೊಂದಿಗೆ ಅಥವಾ ಹೆಂಡತಿಯ ಕೂಡ ಜಗಳವಾಡಿ ಅದರ ಸಲುವಾಗಿ ಸನ್ಯಾಸವನ್ನವಲಂಬಿಸಿದರೆ ಅದು ನಿಜವಾದ ಸನ್ಯಾಸವಾಗುವುದಿಲ್ಲ. ಜೀವನದ ಕಹಿಯನ್ನೇ ಬೇರನ್ನಾಗಿ ಪಡೆದ ಆ ಸನ್ಯಾಸ ಸ್ಥಿರವಲ್ಲ. ಬಹಳ ಬೇಗನೆ ಆ ಸನ್ಯಾಸಿಯ ಮನಸ್ಸು ಹಳೆಯ ಆಸೆಗಳಲ್ಲಿ ನೆಲೆಸಿ ಪುನಃ ಆತನ ಸಂಸಾರ ಚಿಗುರುತ್ತದೆ.

ಸಂಸಾರದ ಬಾಳು ಭಗವಂತನು ನಮಗಿತ್ತ ಕರ್ತವ್ಯವೆಂದುಭಾವಿಸಿ ಗೃಹಸ್ಥಾಶ್ರಮವನ್ನು ಭಕ್ತಿ ಶ್ರದ್ಧೆಗಳಿಂದ ನಡೆಸಿ, ಮನಸ್ಸನ್ನು ಪಳಗಿಸಿ ನಿಜವಾದ ವೈರಾಗ್ಯದಲ್ಲಿ ನೆಲೆಗೊಳಿಸಿದನಂತರ ಸನ್ಯಾಸವನ್ನು ಸ್ವೀಕರಿಸುವವರು ಅದರ ಫಲವನ್ನು ಪಡೆಯುವರು. ಎಲ್ಲಾ ಜೀವಗಳೂ ಒಂದೇ ಪರವಸ್ತುವಿನ ಭಿನ್ನರೂಪಗಳು ಎಂಬ ಸತ್ಯವನ್ನು ಅನುಭವ ಸಿದ್ಧಾಂತವಾಗಿ ತಿಳಿಯುವರು.

* * * *

ಒಂದು ಗ್ರಾಮದಲ್ಲಿ ಸಾಧುಗಳ ಮಠವೊಂದಿದ್ದಿತು. ಅಲ್ಲಿ ಹಲವು ಸಾಧುಗಳು ಪಾತ್ರೆಯನ್ನು ಹಿಡಿದು ಊರಿನೊಳಕ್ಕೆ ಹೋಗಿ ಭಿಕ್ಷೆಯೆತ್ತಿ ಬಂದು ಜೀವನ ಮಾಡುತ್ತಿದ್ದರು.

ಒಂದು ದಿನ ಸಾಧುಗಳಲ್ಲೊಬ್ಬನು ಊರಿನಲ್ಲಿ ಭಿಕ್ಷೆ ಬೇಡುತ್ತಿದ್ದಾಗ ಒಬ್ಬ ಜಮೀನುದಾರನು ತನ್ನ ಸೇವಕನನ್ನು ಬಹಳವಾಗಿ ಹೊಡೆದು ಹಿಂಸಿಸುತ್ತಿದ್ದುದನ್ನು ನೋಡಿದನು. ಸಾಧುವಿಗೆ ಮನಸ್ಸಿನಲ್ಲಿ ವ್ಯಥೆಯಾಯಿತು. "ಅಯ್ಯಾ, ಸಾಕು ನಿಲ್ಲಿಸಿ. ನನಗೋಸುಗವಾದರೂ ಅವನನ್ನು ಹೊಡೆಯಬೇಡಿ, ನಿಮಗೆ ಒಳ್ಳೆಯದಾಗುವುದು!" ಎಂದವನು ವಿನಯದಿಂದ ಜಮೀನುದಾರನನ್ನು ಬೇಡಿಕೊಂಡನು.

ಇದನ್ನು ಕೇಳಿದೊಡನೆ ಸಾಹುಕಾರನಿಗೆ ಕೋಪ ಮತ್ತಷ್ಟು ಹೆಚ್ಚಾ

ಯಿತು. ಸೇವಕನನ್ನು ಬಿಟ್ಟು ಆತನ ಪೆಟ್ಟು ಬಡಸಾಧುವಿನ ಮೇಲೆ ತಿರುಗಿತು.

ಸ್ವಲ್ಪ ಹೊತ್ತಿನೊಳಗೆ ಏಟನ್ನು ತಡೆಯಲಾರದೆ ಅವನು ಕೆಳಗೆ ಬಿದ್ದು ಮೂರ್ಛೆಹೋದನು. ಜಮೀನುದಾರನೂ ಆವೇಶವಡಗಿ ಮನೆಯೊಳಗೆ ಹೋದನು.

ಯಾರೋ ದಾರಿಯಲ್ಲಿ ಹೋಗುತ್ತಿದ್ದವರು, ಸಾಧುವೊಬ್ಬನು ಮೂರ್ಛೆ ಬಿದ್ದಿರುವುದನ್ನು ನೋಡಿ ಮಠಕ್ಕೆ ಸುದ್ದಿಯನ್ನು ಕೊಟ್ಟರು.

ಸಾಧುಗಳು ತಕ್ಷಣವೇ ಆ ಸ್ಥಳಕ್ಕೆ ಹೋಗಿ ಏಟುತಿಂದವನನ್ನು ಮಠಕ್ಕೆ ತಂದು ಉಪಚರಿಸಿದರು. ಮುಖದ ಮೇಲೆ ತಣ್ಣೀರನ್ನು ಚೆಲ್ಲಿ ಸ್ವಲ್ಪ ನೀರನ್ನೂ ಹಾಲನ್ನೂ ಕುಡಿಸಿದ ಮೇಲೆ ಸಾಧುವಿಗೆ ಸ್ವಲ್ಪ ಸ್ವಲ್ಪ ಪ್ರಜ್ಞೆಯುಂಟಾಯಿತು. ಅವನು ಕಣ್ಣು ತೆರೆದೊಡನೆ ಒಬ್ಬನು, "ತಮ್ಮಾ, ನಾನು ಯಾರು ಗೊತ್ತಾಗುವುದೆ?" ಎಂದು ಕೇಳಿದನು.

"ಅಣ್ಣಾ, ಕಾಣುತ್ತದೆ. ನೀನೇ ಮೊದಲು ನನ್ನನ್ನು ಹೊಡೆದದ್ದು, ಪುನಃ ನೀನೇ ಬಾಯಿಗೆ ಹಾಲನ್ನು ಹಾಕಿದೆ" ಎಂದನು.

ಈ ಸಾಧು ಜ್ಞಾನ ಪಡೆದವನಾದುದರಿಂದ ತನ್ನನ್ನು ಹೊಡೆದವನು ಮತ್ತು ತನಗೆ ಉಪಚರಿಸಿದವನು ಇಬ್ಬರನ್ನೂ ಒಂದಾಗಿ ಭಾವಿಸಿದ್ದನು. ಒಳ್ಳೆಯದೂ ಕೆಟ್ಟದ್ದೂ, ಸುಖದುಃಖಗಳೂ ಭಗವಂತನ ಲೀಲೆಯೇ ಅಲ್ಲವೆ?

## ೧೪
## ಜನಸೇವೆ

ಒಂದು ದಿನ ಕೆಲವು ಯುವಕರು ಪರಮಹಂಸರೆಡೆಗೆ ಒಂದು, "ನಾವು ಸಮಾಜ ಸೇವೆಯನ್ನು ಕೈಗೊಳ್ಳಬೇಕೆಂದಿದ್ದೇವೆ" ಎಂದು ಹೇಳಿದರು.

ಬಹಳ ಉತ್ಸಾಹದಿಂದಿದ್ದ ಅವರನ್ನು ನೋಡಿ ಶ್ರೀರಾಮಕೃಷ್ಣ ಪರಮಹಂಸರು ಹೇಳುತ್ತಾರೆ:

"ನೀವು ತೀರ್ಮಾನಿಸಿರುವ ವಿಷಯವೇನೋ ಬಹಳ ಶ್ಲಾಘನೀಯ ವಾದುದು. ಸಮಾಜ ಸೇವೆಯನ್ನು ಮಾಡುವುದು ಒಳ್ಳೆಯ ಕೆಲಸವೆ. ಆದರೆ ಮೊದಲು ದೇವರನ್ನು ಪೂಜೆಮಾಡಿ ಧ್ಯಾನಿಸಿ ಮನಸ್ಸನ್ನು ಶುಭ್ರ

ವಾಗಿ ಮಾಡಿಕೊಂಡು ಅನಂತರ ನೀವು ಯೋಚಿಸಿರುವಂತೆ ಕೆಲಸಮಾಡಿ. ಈಶ್ವರ ಧ್ಯಾನವನ್ನು ಮಾಡಿದರೆ ನಿಮಗೆ ಶಕ್ತಿಯುಂಟಾಗುವುದು. ಭಗವಂತನನ್ನು ಭಕ್ತಿಯಿಂದ ಪ್ರಾರ್ಥಿಸಿ ಬೇಡಿಕೊಂಡರೆ ಸಮಾಜಕ್ಕೆ ಒಳ್ಳೆಯದನ್ನು ಮಾಡುವ ಶಕ್ತಿಯನ್ನು ನಿಮಗೆ ಅವನು ಕೊಡುತ್ತಾನೆ. ನೀವು ಕೈಗೊಳ್ಳುವ ಕಾರ್ಯಗಳಿಗೆ ಬೇಕಾಗುವ ಸಾಮರ್ಥ್ಯ ಸೌಕರ್ಯಗಳನ್ನು ದೇವರ ಕೃಪೆಯಿಂದ ಪಡೆಯುವಿರಿ. ಭಗವಂತನ ನಾಮೋಚ್ಚಾರಣೆಯನ್ನು ಮಾಡಿ ಧ್ಯಾನಿಸಿ. ಅವನ ಮೇಲೆ ಭಕ್ತರು ಕಟ್ಟಿರುವ ಹಾಡುಗಳನ್ನು ಹಾಡಿ. ಅನಂತರ ನಿಮ್ಮ ಕೆಲಸಗಳನ್ನು ಹೇಗೆ ಮಾಡಬೇಕೆಂಬ ವಿಷಯವನ್ನು ಚೆನ್ನಾಗಿ ತಿಳಿಯುವಿರಿ.''

* * * *

ಯಾವ ವಿಧವಾದ ಜನಸೇವೆಯನ್ನು ಕೈಗೊಂಡರೂ ದೇಶಭಕ್ತರು ಶ್ರೀರಾಮಕೃಷ್ಣರು ಮಾಡಿರುವ ಕೆಳಗೆ ಕಂಡ ಉಪದೇಶವನ್ನು ಗಮನಿಸತಕ್ಕದ್ದು :

''ಲೋಕಹಿತಕ್ಕಾಗಿ ಕೆಲಸಮಾಡಬೇಕೆಂಬ ಆಸೆಯಿಂದ 'ಇದನ್ನು ಮಾಡೋಣ,' 'ಅದನ್ನು ಮಾಡೋಣ' ಎಂದು ಕೆಲಸವನ್ನು ಹುಡುಕಿಕೊಂಡು ಅಲೆಯ ಬೇಡಿ. ಸಹಜವಾಗಿ ಬಂದೊದಗುವ ಕೆಲಸವನ್ನು ಮಾಡಿ. ಕೀರ್ತಿಯನ್ನೂ ಹೆಸರನ್ನೂ ಗಳಿಸುವ ಉದ್ದೇಶದಿಂದ ಮಾಡುವ ಕೆಲಸವನ್ನೇ ಶ್ರೇಷ್ಠವಾದುದೆಂದು ತಿಳಿಯಬೇಡಿ. ನಿಜವಾಗಿಯೂ ಸಮಾಜೋದ್ಧಾರಕ್ಕಾಗಿ ಕೆಲಸಮಾಡಬೇಕೆಂಬ ಆಸೆ ನಿಮಗಿದ್ದರೆ, ಯಾವ ವಿಧವಾದ ಕೀರ್ತಿಯನ್ನಾಗಲಿ ಲಾಭವನ್ನಾಗಲಿ ಬಯಸದೆ ಕರ್ತವ್ಯವನ್ನು ಮಾಡಿ. 'ದೇವರೇ, ನನಗೆ ಭಕ್ತಿಯನ್ನು ಕರುಣಿಸು! ಪರಿಶುದ್ಧವಾದ ಮನಸ್ಸು ಹೃದಯಗಳಿಂದ ಕೆಲಸ ಮಾಡುವಂತೆ ಅನುಗ್ರಹಿಸು!' ಎಂದು ಪ್ರಾರ್ಥಿಸಿ.''

* * * *

ದೇಶಸೇವೆಯನ್ನು ಹಲವಾರು ವಿಧದಲ್ಲಿ ಮಾಡಬಹುದು. ಸಮಾಜಸೇವೆಯನ್ನು ಮಾಡುವುದು ಉತ್ತಮ ಕೆಲಸವಾದರೂ, ಪ್ರಸಿದ್ಧಿ ಹೊಂದಬೇಕೆಂಬಾಸೆಯಿಂದ ಅದನ್ನು ಮಾಡಬಾರದು. ಕೀರ್ತಿಯಾಸೆಯಿಂದ ಕೆಲಸ ಮಾಡಿದರೆ ಅದು ಕಷ್ಟವೊದಗಿದಾಗಲೆಲ್ಲಾ ನಮ್ಮನ್ನು ಕೆಟ್ಟದಾರಿಗೇ ಎಳೆಯುವುದು. ಈ ಆಸೆಯೂ ಇನ್ನೂ ಇತರ ಸ್ವಾರ್ಥನಿಷ್ಠವಾದ ಅಪೇಕ್ಷೆಗಳೂ ಜಯಿಸಲಾಗಿದ್ದರೂ ಅಥವಾ ರಹಸ್ಯವಾಗಿ ಮನಸ್ಸಿನಲ್ಲಡಗಿದ್ದರೂ ಸರಿ,

ನಾವು ಮಾಡುವ ಅನೇಕ ಉತ್ತಮ ಪ್ರಯತ್ನಗಳನ್ನೆಲ್ಲಾ ಉಪಯೋಗ ವಿಲ್ಲದಂತೆ ಮಾಡುತ್ತವೆ.

"ನಾನು ಇತರರಿಗಾಗಿ ಎಷ್ಟೋ ದುಡಿದರೂ ಪ್ರಯೋಜನವಾಗ ಲಿಲ್ಲ" ಎಂಬುದಾಗಿ ಹಲವಾರು ದೇಶಸೇವಕರು ನಿರಾಶರಾಗಿ ವ್ಯಥೆಪಡು ವುದನ್ನು ನೋಡುತ್ತೇವೆಯಲ್ಲವೇ? ಈ ವಿಧವಾದ ದುಃಖವೂ ಕಹಿಯೂ ಮನಸ್ಸಿನಲ್ಲುಂಟಾಗುವುದಕ್ಕೆ ಕಾರಣವೇನು? ನಾವು ಯಾವುದೋ ಆಸೆಯ ತಳಹದಿಯ ಮೇಲೆ ಕೆಲಸಮಾಡಿ, ಆಸೆ ಸಫಲವಾಗದೆ ಹೋದುದರಿಂದ ನಿರಾಶರಾಗುತ್ತೇವೆ. ಕೀರ್ತಿ ಹೆಸರುಗಳನ್ನು ಪಡೆಯಬೇಕೆಂಬಾಸೆಯಿಂದ ದೇಶಸೇವೆಯನ್ನೋ ಸಮಾಜಸೇವೆಯನ್ನೋ ಮಾಡ ಹೊರಟರೆ, ನಿಶ್ಚಯ ವಾಗಿಯೂ ನಿರಾಶೆಹೊಂದಿ ದುಃಖವನ್ನನುಭವಿಸಬೇಕಾಗುತ್ತದೆ. ಪಾಪ ಮೂಲವಾದ ಆಸೆ ಎಂತಹ ಒಳ್ಳೆಯ ಕೆಲಸವನ್ನಾದರೂ ಕೆಡಿಸಿ ಹಾಳು ಮಾಡುತ್ತದೆ. ಇತರರಿಗೆ ಒಳ್ಳೆಯದಾಗಲೆಂದು ನಾವು ಸಮಾಜಸೇವೆ ಯನ್ನು ಮಾಡಿದರೆ ಅದರ ಫಲಾಫಲಗಳನ್ನು ದೇವರಿಗರ್ಪಿಸಿ, ಸಫಲ ರಾದರೂ ಅದಕ್ಕೆ ಮನಸೋಲಬಾರದು.

ಬಹಿರಂಗವಾಗಿ ಸ್ವಾರ್ಥಲಾಭಕ್ಕಾಗಿಯೇ ಅಥವಾ ಮನಸ್ಸಿನಲ್ಲಿ ಹುದುಗಿರುವ ಕೀರ್ತಿಯಾಸೆಗಾಗಿಯೋ ಕೆಲಸವನ್ನು ಕೈಗೊಂಡರೆ ಅದು ಸೇವೆಯೆನಿಸುವುದಿಲ್ಲ, ಒಂದು ವಿಧವಾದ ವ್ಯಾಪಾರವೇ ಆಗುತ್ತದೆ. ನಿಜ, ದೇಶಸೇವೆಮಾಡಿ ಉತ್ತಮರನೇಕರು ಕೀರ್ತಿವಂತರಾಗಿ ಹೆಸರುವಾಸಿಯನ್ನು ಪಡೆದಿದ್ದಾರೆ. ಆದರೆ ಹಾಗೆ ಯಶಸ್ವಿಯಾದವರು ಯಶಸ್ಸನ್ನು ಬಯಸಿ ಕೆಲಸಮಾಡಲಿಲ್ಲ. ಅವರ ಕೀರ್ತಿ, ವಿಜಯದ ರಹಸ್ಯಕಾರಣವೇನೆಂದರೆ ಅವರು ಫಲಾಪೇಕ್ಷೆಯಿಲ್ಲದೆ ಕೆಲಸಮಾಡಿದುದೇ. ಇದನ್ನರಿಯದೆ, ಅವರ ಹಾಗೆಯೇ ನಾವೂ ಕೀರ್ತಿಯನ್ನು ಗಳಿಸಬೇಕೆಂಬಾಸೆಯಿಂದ ಕೆಲಸ ಮಾಡಿದರೆ ನಾವು ಅಪಜಯ ಹೊಂದಿ ನಿರಾಶರಾಗುವುದೇ ನಿಶ್ಚಯ.

* * * *

ಆಸೆಯಿಲ್ಲದೆ ಮನುಷ್ಯನು ಹೇಗೆ ಸಮಾಜ ಸೇವೆಯನ್ನು ಮಾಡುವುದ ಕ್ಕಾಗುತ್ತದೆ ಎಂದು ಕೆಲವರು ಸಂದೇಹಪಡಬಹುದು. ಹಾಗೆ ಸಂದೇಹ ಪಡುವವರು ತಮ್ಮ ಕುಟುಂಬ ಕೆಲಸಗಳನ್ನು ಮಾತ್ರ ಗಮನಿಸಿಕೊಂಡು ಯೋಗ್ಯ ರೀತಿಯಲ್ಲಿ ತಮ್ಮ ಬಾಳನ್ನು ಸಾಗಿಸಿದರೆ ಅದೇ ಸಾಕಾದಷ್ಟು

ದೇಶಸೇವೆಯಾಗುತ್ತದೆ. ಅದನ್ನು ಬಿಟ್ಟು ಸಮಾಜ ಸೇವೆಗೆಂದು ಹೊರಟು ನಿರಾಶೆಯನ್ನೂ ಬೇಸರವನ್ನೂ ಪಡೆಯಬೇಕಾಗಿಲ್ಲ.

ಯಾವ ವಿಧವಾದ ಆಸೆಯೂ ಬಯಕೆಯೂ ಇಲ್ಲದೆ ಸಮಾಜ ಸೇವೆಯನ್ನು ಮಾಡುವುದು ಬಹಳ ಕಷ್ಟ. ಅದರಿಂದಲೇ ಶ್ರೀ ರಾಮಕೃಷ್ಣರು ಹೇಳುತ್ತಾರೆ:

"ಭಗವಂತನ ಕೃಪೆಯನ್ನು ಪಡೆದು ಸಮಾಜಸೇವೆಯನ್ನು ಮಾಡಿ. 'ದೇವರೇ, ನನ್ನ ಮನಸ್ಸಿನಲ್ಲಿ ಭಕ್ತಿಯನ್ನು ಸ್ಥಿರವಾಗಿ ನಿಲ್ಲಿಸು' ಎಂದು ಮೊದಲು ದೈನ್ಯದಿಂದ ಪ್ರಾರ್ಥಿಸಿ."

ಈ ಕಾಲದಲ್ಲಿ ಲೋಕಹಿತೈಷಿಗಳಾಗಿ ಕೆಲಸಮಾಡಲು ಮುಂದೆ ಬಂದಿರುವ ಅನೇಕರಿಗೆ ಶ್ರೀರಾಮಕೃಷ್ಣರು ಕೊಟ್ಟಿರುವ ಈ ಎಚ್ಚರಿಕೆ ಬಹಳ ಮುಖ್ಯವಾದುದು. ದೇಹ ಕಷ್ಟವನ್ನೂ ಅನುಭವಿಸಿ ಹಣವನ್ನು ಕಳೆದುಕೊಂಡರೂ ನಾವು ಪಟ್ಟಶ್ರಮವೆಲ್ಲಾ ಬರಿದಾಯಿತಲ್ಲಾ ಎಂದನೇಕರು ದುಃಖಪಡುತ್ತಾರೆ. ಇದಕ್ಕೇನು ಕಾರಣವೆಂದರೆ, ಕೆಲಸದ ತಳಹದಿಯಾಗಿದ್ದ ಮನೋಭಾವ ದೋಷಪೂರಿತವಾಗಿದ್ದುದು. ಸ್ವಚ್ಛವಾದ ಹಾಲಿನಲ್ಲಿ ಬಿದ್ದ ಮೊಸರು ಹನಿಯಂತೆ, ಈ ದೋಷ ತನ್ನ ಕೆಲಸವನ್ನು ಮಾಡುತ್ತದೆ. ಕೀರ್ತಿಯ ಆಸೆಯನ್ನು ತಳಹದಿಯಾಗಿಟ್ಟು ನಾವು ಕಟ್ಟಿದ ಮಾಳಿಗೆ ಕುಸಿದು ಬಿದ್ದಾಗ ನಮಗೆ ದುಃಖವುಂಟಾಗುವುದಿಲ್ಲವೆ? ಇದಕ್ಕಾಗಿಯೇ "ಸಮಾಜಸೇವೆಯನ್ನು ಕೈಗೊಳ್ಳುವ ಮೊದಲು ದೇವರನ್ನು ಪ್ರಾರ್ಥಿಸಿ; ಭಕ್ತಿ ಎಂಬ ಪವಿತ್ರ ನೀರಿನಿಂದ ಮನಸ್ಸನ್ನು ಶುದ್ಧವಾಗಿ ತೊಳೆದು ಅನಂತರ ಕೆಲಸವನ್ನು ಪ್ರಾರಂಭಿಸಿರಿ" ಎಂದು ಶ್ರೀರಾಮಕೃಷ್ಣರು ಬೋಧಿಸುತ್ತಾರೆ. ಅಸ್ತಿಭಾರವನ್ನು ಬಲವಾಗಿ ಹಾಕಿದರೆ ಅದರ ಮೇಲೆ ಎಷ್ಟು ದೊಡ್ಡ ಮಾಳಿಗೆಯನ್ನು ಕಟ್ಟಿದರೂ ದೃಢವಾಗಿ ನಿಲ್ಲುತ್ತದೆ.

ಶಸ್ತ್ರವೈದ್ಯರು ಶಸ್ತ್ರವನ್ನು ಉಪಯೋಗಿಸುವುದಕ್ಕೆ ಮೊದಲು ಏನು ಮಾಡುತ್ತಾರೆ? ಕೈಯನ್ನೂ ಶಸ್ತ್ರಗಳನ್ನೂ ಶುದ್ಧವಾಗಿ ತೊಳೆದು ಸಿದ್ಧಪಡಿಸಿಕೊಂಡ ಮೇಲೆಯೇ ಕೆಲಸದಲ್ಲಿ ತೊಡಗುವರು. ಹಾಗೆಯೇ ಸಮಾಜ ಸೇವೆಯನ್ನು ಮಾಡಲಿಚ್ಛಿಸುವವರು ಮೊದಲು ತಮ್ಮ ಮನಸ್ಸನ್ನು ಶುದ್ಧವಾಗಿ ತೊಳೆಯಬೇಕು. ಆಸೆಯೆಂಬ ದೋಷ ಅದರಲ್ಲಿ ಕಿಂಚಿತ್ತೂ ಇರಬಾರದು. ಇದಾದ ಬಳಿಕ ಕೆಲಸಮಾಡಿದರೆ ದೇವರ ಕೃಪೆಯಿಂದ ಎಲ್ಲವೂ ಸುಖಪ್ರದವಾಗುವುದು. ವಿಜಯಿಗಳಾಗಿ ಶಾಂತಿಯನ್ನು ಪಡೆಯುವುದಕ್ಕೆ

ಬೇರೆ ಯಾವ ಸಾಧನವೂ ಇಲ್ಲ. ದೇವರನ್ನು ಧ್ಯಾನಿಸಿ, "ಎಲ್ಲಾ ನಿನ್ನದೇ" ಎಂದು ಮನಸ್ಸನ್ನು ಸ್ಥಿರಗೊಳಿಸಬೇಕೇ ಹೊರತು, ಬಾಯಿನಿಂದ ಮಂತ್ರ ಗಳನ್ನುಚ್ಚರಿಸಿ ಮನಸ್ಸನ್ನು ಮೋಸಗೊಳಿಸಬಾರದು. ಈ ಒಣ ಆಚಾರ ಗಳಿಂದ ಪ್ರಯೋಜನವಿಲ್ಲ. ಮನಃಪೂರ್ವಕವಾದ ಭಕ್ತಿಯಿರಬೇಕು. ಬಳಿಕ ಯಾವ ಸೇವೆಯನ್ನಾದರೂ ಪ್ರಾರಂಭಿಸಬಹುದು. ದೇವರ ಧ್ಯಾನ ವಿಲ್ಲದೆ ಕೀರ್ತಿಯನ್ನು ಬಯಸಿ ಮಾಡುವ ಕೆಲಸವೆಲ್ಲಾ ವಿಫಲವಾಗಿ, ದುಃಖವನ್ನೂ ಕೋಪವನ್ನೂ ಅಸೂಯೆಯನ್ನೂ ಉಂಟುಮಾಡುವ ಬೀಜ ವಾಗಿ ನಿಲ್ಲುತ್ತದೆ.

* * * *

ದೇಶಸೇವೆ, ಜನಸೇವೆಗಳನ್ನು ಕೈಗೊಳ್ಳುವ ಮುನ್ನ ಭಗವಾನ್ ಶ್ರೀರಾಮಕೃಷ್ಣರು ಉಪದೇಶಿಸಿರುವ ಹಾಗೆ ದೇವರ ಧ್ಯಾನಮಾಡಿ. ಭಕ್ತಿ ಯಿಂದ ಮನಃಶ್ಶುದ್ಧಿಯನ್ನು ಹೊಂದಿ ಕೆಲಸವನ್ನಾರಂಭಿಸಬೇಕು. ಕೆಲಸ ಮಾಡುವಾಗಲೂ ಕೂಡ ಸದಾಕಾಲವೂ ಭಗವಂತನ ಸ್ಮರಣೆ ಮನಸ್ಸನ್ನು ಬಿಟ್ಟಗಲದೆ ಸ್ಥಿರವಾಗಿ ನಿಲ್ಲಬೇಕು.

ಜನಸೇವೆ ಬೇರೆ, ದೇವರ ಪೂಜೆ ಬೇರೆ ಎಂದು ತಿಳಿಯಬಾರದು. ಎಲ್ಲವೂ ಭಗವಂತನ ಸೇವೆಯೆಂದೇ ಎಣಿಸಿ ಕೆಲಸಮಾಡಬೇಕು. ಹೀಗೆ ದೇವರನ್ನು ಸ್ಮರಿಸುತ್ತಾ ಇದ್ದರೆ ಅದು ಕೆಲಸಕ್ಕೆ ಅಡ್ಡಿಯಾಗುವುದಿಲ್ಲ, ಅದರ ಬದಲು ಈ ಅಭ್ಯಾಸ ಮನಸ್ಸಿಗೆ ಹರ್ಷವುಂಟುಮಾಡುವುದು. ಶ್ರದ್ಧೆ ಯನ್ನೂ ಸಾಮರ್ಥ್ಯವನ್ನೂ ಸಹ ಉಂಟುಮಾಡುವುದು. ಮಹಾತ್ಮಾ ಗಾಂಧಿಯವರು ಪಡೆದ ಅಪಾರ ಜಯಗಳ ರಹಸ್ಯವು ಇದೇ ಎಂದು ನಾನು ದೃಢವಾಗಿ ಹೇಳಬಲ್ಲೆ. ಮನುಷ್ಯನು ನಡೆಯುವಾಗ ಅವನ್ನನುಸರಿಸಿಯೇ ಅವನ ಛಾಯೆಯೂ ಹೋಗುವ ಹಾಗೆ, ಮಹಾತ್ಮರು ಯಾವ ಕೆಲಸ, ಯೋಚನೆ, ಪ್ರಯತ್ನಗಳನ್ನು ಕೈಗೊಂಡಾಗಲೂ ಭಗವಂತನ ಸ್ಮರಣೆ ಅವರ ಮನಸ್ಸಿನಲ್ಲಿ ಸ್ಥಿರವಾಗಿ ನಿಂತು ಅವರ ಕೆಲಸಗಳನ್ನನುಸರಿಸಿತು. ಅವರ ಕೆಲಸಗಳಿಗೆ ಅದು ಯಾವಾಗಲೂ ತಡೆಯಾಗಲಿಲ್ಲ, ಮತ್ತು ಯಾವಾಗಲೂ ಜಯವನ್ನುಂಟು ಮಾಡುತ್ತಿತ್ತು. ನಾವು ಮಾಡುವ ಅಲ್ಪ ಸೇವೆಗಳಲ್ಲೂ ಕೂಡ ಹಾಗೆಯೇ ದೇವರ ಧ್ಯಾನ್ಯ ಛಾಯೆಯ ಹಾಗೆ ನಮ್ಮನ್ನನುಸರಿಸಿ ಬಂದರೆ ಮೌನವಾಗಿ ಆಡಂಬರವಿಲ್ಲದೆ ಪ್ರಯತ್ನಗಳೆಲ್ಲಾ ಸಫಲವಾಗುತ್ತವೆ. ಈಶ್ವರನನ್ನು ಚಿರಧ್ಯಾನ ಮಾಡುವುದು ಸಮಾಜ ಸೇವೆಗೆ ಒಂದು ಅತ್ಯವಶ್ಯಕ

ವಾದ ಅಭ್ಯಾಸ. ಶಸ್ತ್ರವೈದ್ಯರಿಗುಚಿತವಾದ ಶಸ್ತ್ರ ಶುಚಿಯಭ್ಯಾಸದಂತೆ ಮನಸ್ಸನ್ನು ಶುಭ್ರಗೊಳಿಸಿ ಕೆಲಸಮಾಡುವ ಪದ್ಧತಿ ಸಮಾಜಸೇವೆಗೆ ಅತ್ಯಾವಶ್ಯಕವಾದುದು. ಪವಿತ್ರವಾದ ಮನವೇ ಒಂದು ದೊಡ್ಡ ಸಾಧನ ಮತ್ತು ಐಶ್ವರ್ಯ; ಈ ಸಂಪತ್ತನ್ನು ಪಡೆಯುವುದಕ್ಕೆ ಭಕ್ತಿಯೇ ಮಾರ್ಗ.

## ೧೫

## ಅದ್ವೈತ

“ಅದ್ವೈತವನ್ನು ಕುರಿತು ನಮ್ಮ ಅಭಿಪ್ರಾಯವೇನು? ಬ್ರಹ್ಮವೊಂದೇ ಸತ್ಯ, ಪ್ರಪಂಚವೆಲ್ಲಾ ಮಿಥ್ಯೆ,—ಇದೇಯಲ್ಲವೆ ವೇದಾಂತಸಾರವೆಲ್ಲಾ?” ಎಂಬುದಾಗಿ ಅದ್ವೈತ ಶಾಸ್ತ್ರವನ್ನು ಪಠಿಸಿದ್ದ ದೊಡ್ಡ ಪಂಡಿತರೊಬ್ಬರು ಪರಮಹಂಸರನ್ನು ಪ್ರಶ್ನಿಸಿದರು. ಈ ಸಂದರ್ಭದಲ್ಲಿ ಭಗವಾನ್ ಶ್ರೀರಾಮಕೃಷ್ಣರು ಕೆಳಗೆ ಕಂಡ ಉಪದೇಶವನ್ನು ಅನುಗ್ರಹಿಸಿದರು:

“ಜಗತ್ತೆಲ್ಲಾ ಸುಳ್ಳು, ಎಲ್ಲಾ ಮಾಯೆ, ಪರಮವಸ್ತುವೊಂದೇ ಸತ್ಯ—ಎಂದು ಮುಂತಾಗಿ ವಾದಿಸಿ ನಿರೂಪಿಸುವುದು ಸುಲಭ. ಆದರೆ ಮಾತಿನಲ್ಲಿ ನಿರೂಪಿಸುವುದಕ್ಕೂ ನಿಜವಾದ ಜ್ಞಾನಕ್ಕೂ ಸಂಬಂಧವಿಲ್ಲ. ಜ್ಞಾನ ಬೇರೆ, ವಿದ್ಯಾಚಾತುರ್ಯಗಳು ಬೇರೆ. ಮರೀಚಿಕೆ ಎಂದರಿತ ಮೇಲೆ ಯಾರೂ ಕೊಡವನ್ನೆತ್ತಿಕೊಂಡು ನೀರು ತರಲು ಹೋಗವುದಿಲ್ಲ. ಯಾರಾದರೂ ತರುವಂತೆ ಹೇಳಿದರೂ ನಗುತ್ತೇವೆ. ನಾವು ನೋಡುವುದು ನೀರಲ್ಲ, ಕೃತಕನೀರೆಂದು ತಿಳಿದನಂತರ, ನಾವು ಅದನ್ನು ಕುರಿತು ತಿಳಿದುಕೊಂಡ ಸತ್ಯಕ್ಕನುಗುಣವಾಗಿ ನಡೆದುಕೊಳ್ಳುತ್ತೇವೆ. ಮರೀಚಿಕೆಯನ್ನು ಕುರಿತು ನಮಗಾದ ಅರಿವೂ ನಮ್ಮ ನಡವಳಿಕೆಯೂ ಸಲಭವಾಗಿ ಹೊಂದಿಕೊಳ್ಳುತ್ತವೆ.

“ಅದ್ವೈತ ಶಾಸ್ತ್ರ ವಿಷಯ ಹೀಗಲ್ಲ. ‘ಪರವಸ್ತುವೊಂದೇ ಸತ್ಯ; ಜೀವರಾಶಿಗಳ ವ್ಯಕ್ತರೂಪಗಳೂ, ಪ್ರಪಂಚದಲ್ಲಿ ಎದ್ದು ಕಾಣಿಸುವ ಸಕಲ ವಸ್ತು ಭೇದ ವಿಭೇದಗಳೂ ಮಾಯೆ’ ಎಂದು ವೇದಾಂತ ಪರಿಶೋಧನೆಗನುಗುಣವಾಗಿ ನಿಶ್ಚಯಿಸಿದರೂ ಕೂಡ ಈ ನಿಶ್ಚಯವು ನಮ್ಮ ಮನಸ್ಸಿನ ಅರಿವಿನಾಳದಲ್ಲಿ ಬೇರೂರಿ ನಿಲ್ಲುವುದಿಲ್ಲ. ವಾದಿಸಿ ಕಂಡ ಸತ್ಯ ನಮ್ಮ ಅರಿವಿನಲ್ಲಿ

ಐಕ್ಯವಾಗದೆ ಪ್ರತ್ಯೇಕವಾಗಿ ನಿಲ್ಲುತ್ತದೆ. ಸ್ವಬೋಧೆಯೆಂಬ ಮೇಣದಲ್ಲಿ ಅಂಟುವುದಿಲ್ಲ. ಓದಿ, ತರ್ಕಿಸಿ, ನಿಶ್ಚಯಕ್ಕೆ ತಂದ ಸತ್ಯ ಕತ್ತಿಯ ಮೇಲಿನ ಹೊರೆಯಾಗಿ ನಿಲ್ಲುತ್ತದೆಯೇ ಅಲ್ಲದೆ ಜ್ಞಾನವಾಗಿ ಪರಿವರ್ತನೆ ಹೊಂದುವುದಿಲ್ಲ. ಎಲ್ಲಾ ಮಾಯೆಯೆಂದು ಸಾಧಿಸಿ ವಾದಿಸಿದ ಅರಿವಾಳಿಗಳಾದ ನಾವು ಮರುದಿನವೇ ಊಟಕ್ಕಾಗಿ ಅಲೆಯುತ್ತೇವೆ. ನಮ್ಮ ಪ್ರಯತ್ನಗಳಿಗೆ ಯಾರಾದರೂ ಅಡ್ಡಿಯಾದರೆ ಅವರ ಮೇಲೆ ಬಹಳ ಕೋಪವುಂಟಾಗುತ್ತದೆ. ನಾವು ಪಡೆದ ವಿದ್ಯಾಭ್ಯಾಸ ನಮ್ಮ ಬಾಳಿಗೆ ಹೊಂದಿಕೊಳ್ಳುವುದಿಲ್ಲ. ಅದ್ವೈತ ಸುಲಭ ಮಾರ್ಗವಲ್ಲ. ಸಾಧನೆಯ ಭಕ್ತಿ ಆವಶ್ಯಕತೆ ಇಲ್ಲಿ ಎದ್ದು ಕಾಣಿಸುವುದು."

"ಒಂದು ಹಾವನ್ನಾಗಲಿ ಹುಲಿಯನ್ನಾಗಲಿ ಕಂಡರೆ ನಮ್ಮ ದೇಹ ಭಯದಿಂದ ನಡುಗುತ್ತದೆ. ಇಂದ್ರಿಯದ ಮೂಲಕ ನಮಗಾದ ಅರಿವು ದೇಹವನ್ನು ಅಸ್ಥಿರಗೊಳಿಸುತ್ತದೆ. ಹಸಿವಿನಿಂದ ಬಳಲಿದವನು ಒಳ್ಳೆಯ ಆಹಾರವನ್ನು ಕಂಡರೆ ಅವನ ಬಾಯಿಯಲ್ಲಿ ನೀರೂರುತ್ತದೆ. ಆಹಾರದ ಸತ್ತ್ವ ನಮ್ಮ ದೇಹ ಪ್ರಾಣಗಳೊಂದಿಗೆ ಹೊಂದಿಕೊಂಡು ಕೆಲಸಮಾಡುತ್ತದೆ.

"ಸ್ನೇಹಿತನನ್ನೋ ಪ್ರಿಯಬಂಧುಗಳನ್ನೋ ಕಂಡರೆ, ಅವರ ಗುರುತನ್ನು ಹಿಡಿದು ನಾವು ಸುಮ್ಮನಾಗುವುದಿಲ್ಲ; ತುಂಬಿದ ಸಂತೋಷದಿಂದ ಪುಳಕಿತರಾಗುತ್ತೇವೆ."



"ಚಿತ್ರದಲ್ಲಿ ಬರೆದಿರುವ ಹಾವನ್ನೋ ಹುಲಿಯನ್ನೋ ಕಂಡ ಹಾಗೆ ಅದ್ವೈತ ಸತ್ಯವನ್ನು ವಿದ್ಯಾಪರಿಶೋಧನೆಯಲ್ಲಿ ಮಾತ್ರ ಕಾಣುವುದರಲ್ಲಿ ಪ್ರಯೋಜನವೇನೂ ಇರುವುದಿಲ್ಲ."

"ಒಬ್ಬನು ನಿಜವಾಗಿಯೂ ಅದ್ವೈತಜ್ಞಾನವನ್ನು ಸಂಪಾದಿಸಿದರೆ ಆ ಕ್ಷಣವೇ ಅವನು ಪರವಸ್ತುವಿನೊಡನೆ ಐಕ್ಯವಾದ ಸ್ಥಿತಿಯನ್ನು ಪಡೆಯಬೇಕಲ್ಲವೆ? ಕಾಡಿನಲ್ಲಿ ಹುಲಿಯನ್ನು ಕಂಡೊಡನೆ ಭಯದಿಂದ ದೇಹದಾದ್ಯಂತ ನಡುಗುವ ಹಾಗೆಯೇ ಸತ್ಯ ಸಾಕ್ಷಾತ್ಕಾರವನ್ನು ಪಡೆದವನು ಆ ಕ್ಷಣವೇ ಆನಂದ ಪರವಶನಾಗಿ ಸಮಾಧಿಯವಸ್ಥೆಯನ್ನು ಹೊಂದುವನು."

* * * *

ಬ್ರಹ್ಮ ಒಂದೇ ಇರುವುದು; ಮಿಕ್ಕದ್ದೆಲ್ಲಾ ಮಾಯೆ, ಎಂದು ಒಬ್ಬನು ಅನುಭವದ ಮೂಲಕ ಈ ಜ್ಞಾನವನ್ನು ಪಡೆದರೆ ಭೇದಭಾವಗಳಿಗೆ ಅವಕಾಶವೆಲ್ಲಿಯದು? ಭೇದಭಾವಗಳು ಬಿಟ್ಟು ಹೋಗದಿದ್ದರೆ

ಪಡೆದ ಜ್ಞಾನವೆಲ್ಲಾ ಮಾತಿನ ಮಟ್ಟಿಗೇ ಅಲ್ಲದೆ ಅನುಭವ ಸತ್ಯವಾಗುವುದಿಲ್ಲ.

ಅದ್ವೈತ ಜ್ಞಾನವುಂಟಾದರೆ, ಕರ್ಪೂರ ಸಂಪೂರ್ಣವಾಗಿ ಉರಿದು ಏನೂ ಇಲ್ಲದಂತಾಗುವ ಹಾಗೆ ಅಜ್ಞಾನವಾದ ಭೇದಭಾವಗಳೆಲ್ಲಾ ಸಂಪೂರ್ಣವಾಗಿ ಅದೃಶ್ಯವಾಗುವುವು. ಕರ್ಪೂರ ಉರಿದ ಮೇಲೆ ಬೂದಿಯಿರುತ್ತದೆಯೇ? "ನಾನು ಉರಿದು ನಾಶವಾದೆ" ಎಂದು ಹೇಳುವುದಕ್ಕೆ ಕರ್ಪೂರ ಉಳಿಯುತ್ತದೆಯೇ? ಹಾಗೆಯೇ ಭೇದ ಭಾವಗಳು ಜ್ಞಾನವೆಂಬ ಅಗ್ನಿಯಲ್ಲಿ ಉರಿದು ಕುರುಹೇ ಇಲ್ಲದಂತೆ ಮಾಯವಾಗುತ್ತವೆ. ಆನಂದಮಯನಾದ ಒಬ್ಬನು ಮಾಯೆಯನ್ನು ಮಾಯೆಯ ಹಾಗೂ, ಸತ್ಯವನ್ನು ಸತ್ಯದಹಾಗೂ ಅನುಭವಿಸುತ್ತಾನೆ. ಆದರೆ ಆ ಸ್ಥಿತಿಯಲ್ಲಿ, ನೀನು, ಅದು, ಇದು, ಅರಿವು, ಅಜ್ಞಾನ, ಸತ್ಯ, ಸುಳ್ಳು ಎಂಬೀ ಭಾವನೆಗಳಿಗಾಗಲಿ ಮಾತುಗಳಿಗಾಗಲಿ ಅವಕಾಶವಿರುವುದಿಲ್ಲ. ಎಲ್ಲೆಯಿಲ್ಲದ ಮೌನವಾದ ಆನಂದ ಪ್ರವಾಹದೊಡನೆ ಆತನ ವ್ಯಕ್ತಿತ್ವ ಲೀನವಾಗುತ್ತದೆ. ಉಪ್ಪಿನಲ್ಲಿ ಮಾಡಿದ ಒಂದು ಪ್ರತಿಮೆಯನ್ನು ನೀರಿನಲ್ಲಿ ಹಾಕಿದರೆ ಅದು ಕರಗಿ ಹೋಗುವ ಹಾಗೆ ಅದ್ವೈತ ಸತ್ಯಸಾಕ್ಷಾತ್ಕಾರವನ್ನು ಪಡೆದುಕೊಂಡವನ ಚಿತ್ತ ಪರವಸ್ತುವೆಂಬ ಸಚ್ಚಿದಾನಂದ ಪ್ರವಾಹದಲ್ಲಿ ಕರಗಿ ಐಕ್ಯವಾಗುತ್ತದೆ. "ನಾನು ಕರಗಿ ಹೋದೆ" ಎಂದು ಕರಗಿದ ಉಪ್ಪು ಹೇಗೆ ಹೇಳುವುದು? "ಅರಿತೆ," "ಅರಿಯಲಿಲ್ಲ" ಎಂದು ಯಾರಾದರೂ ವಾದಿಸುವಾಗ "ನಾನು," "ನೀನು," ಎಂದು ಭೇದಭಾವದ ಅರಿವಿನಲ್ಲೇ ಮಾತುಗಳು ಸಾಗುತ್ತವೆ. ಆ "ನಾನು" ಎಂಬ ಭಾವವಿರುವವರಿಗೂ ಅವನಿಗೆ ಪ್ರಪಂಚ ಹೇಗೆ ಮಾಯವಾಗುತ್ತದೆ? ಭೇದಭಾವಗಳು ಮರೆಯಾದರೆ ವಾದ ಪ್ರತಿವಾದಗಳೇ ಇರುವುದಿಲ್ಲ, ಬರಿಯ ಮೌನವೇ ನೆಲೆಸುತ್ತದೆ.

ಇದೇ ಅದ್ವೈತವನ್ನು ಉಪದೇಶಮಾಡುವುದರಲ್ಲಿರುವ ಕಷ್ಟ; ಅರಿವಿಗೆ ನಿಲುಕದ ಪರವಸ್ತುವನ್ನು ಮಾಯೆಯಲ್ಲಿ ಸಿಕ್ಕಿಬಿದ್ದ ನಾವು ವಾದಿಸಿ ತರ್ಕಿಸಿ ನಿರೂಪಿಸುವುದು ಹೇಗೆ? ಉಪದೇಶ, ವಾದಗಳನ್ನು ನಡೆಸುವ ಆಚಾರ್ಯನಿಗೂ ಕೇಳುವ ಶಿಷ್ಯನಿಗೂ "ನೀನು," "ನಾನು" ಎಂಬ ವ್ಯತ್ಯಾಸ ಭಾವನೆ ಇದ್ದೇ ಇರುತ್ತದೆ. ಇಬ್ಬರಿಗೂ ಪ್ರಪಂಚ ಸತ್ಯವಾಗಿಯೇ ಇರುತ್ತದೆ. ಸಮಾಧಿಯಲ್ಲಿ ಮಾತ್ರ ಒಬ್ಬನು ಅದ್ವೈತ ಸತ್ಯವನ್ನು ಅನುಭವಿಸಿ ಅರಿಯಲು ಸಾಧ್ಯ. ಇತರ ಅವಸ್ಥೆಗಳಲ್ಲಿ ವಿವರಿಸಲ್ಪಡುವ ಅದ್ವೈತ

ಬರಿಯ ಗಾಳಿಯಿಂದುಬ್ಬಿದ ರಬ್ಬರು ಮೂಟೆ; ಅದರ ಸಹಾಯದಿಂದ ಸ್ವಲ್ಪದೂರ ಮಾತ್ರ ಈಜಬಲ್ಲೆವು. ಪಡೆದ ವಿದ್ಯಾಭ್ಯಾಸವನ್ನು ಭಕ್ತಿಯ ತಳಹದಿಯಲ್ಲಿಟ್ಟು ಬೆಳೆಸಿ ದೇವರನ್ನು ಎಡೆಬಿಡದೆ ಧ್ಯಾನಿಸಿ ಪೂಜಿಸಿದರೆ ವಿದ್ಯೆ ಜ್ಞಾನವಾಗಿ ಪರಿವರ್ತನೆ ಹೊಂದುತ್ತದೆ.

೧೬

## ಅರ್ಚಾವತಾರ

ಮನೆಯನ್ನು ಕಟ್ಟುವಾಗ ಕಾಲಾವಧಿಯನ್ನು ಕಟ್ಟಿ ಅದರ ಮೇಲೆ ನಿಂತು ಕೆಲಸಗಾರರು ಕಟ್ಟಡವನ್ನು ಕಟ್ಟುತ್ತಾರೆ. ಮನೆಯನ್ನು ಕಟ್ಟಿ ಯಾದನಂತರ ಕಾಲಾವಧಿಯಿಂದ ಪ್ರಯೋಜನವಿಲ್ಲ. ನಿಜವಾದ ಜ್ಞಾನ ವನ್ನು ಪಡೆದವರಿಗೆ ಮಠ ದೇವಾಲಯಗಳ ಆವಶ್ಯಕವಿರುವುದಿಲ್ಲ. ಧ್ಯಾನ ದಲ್ಲಿ ಮನಸ್ಸನ್ನು ಸ್ಥಿರಗೊಳಿಸುವ ಅಭ್ಯಾಸವನ್ನು ಮಾಡುವವರಿಗೆ ಪೂಜೆಯೂ ಸ್ನಾನಾದಿಗಳೂ ಅತ್ಯಾವಶ್ಯಕ.

ಭಕ್ತಿಯಿಂದ ಜೇಡಿಮಣ್ಣನ್ನು ತೆಗೆದುಕೊಂಡು ಅದನ್ನು ಲಿಂಗಾಕಾರ ವಾಗಿ ರೂಪಿಸಿದರೆ ಅದೇ ಈಶ್ವರನಾಗುತ್ತದೆ. ಎಲ್ಲೆಲ್ಲೂ ಇರುವ ಈಶ್ವರನು ಆ ಲಿಂಗದಲ್ಲಿಲ್ಲದೆ ಹೋಗುವನೆ?

* * * *

"ವಿಗ್ರಹಗಳೆಲ್ಲಾ ಮಣ್ಣು ಕಲ್ಲುಗಳಿಂದ ಮಾಡಿದ್ದಾಗಿವೆ; ಇವನ್ನು ಹೇಗೆ ಭಕ್ತಿಯಿಂದ ಧ್ಯಾನಿಸಿ ಪೂಜಿಸುವುದು ಸಾಧ್ಯ?" ಎಂದೊಬ್ಬರು ಪರಮಹಂಸರನ್ನು ಕೇಳಿದರು.

"ನೀವೇಕೆ ಆ ವಿಗ್ರಹಗಳನ್ನು ಮಣ್ಣು, ಕಲ್ಲು, ಲೋಹವೆಂದೆಲ್ಲಾ ಭಾವಿಸುತ್ತೀರಿ? ಪರವಸ್ತುವಿನಿಂದಾದ ಬಾಹ್ಯ ರೂಪಗಳು ಇವು ಎಂದೇಕೆ ಎಣಿಸಬಾರದು? ಪಂಚಭೂತಗಳಲ್ಲೂ ಭಗವಂತನು ವ್ಯಾಪಿಸಿದ್ದಾನೆ. ಸಮಸ್ತ ಸೃಷ್ಟಿವಸ್ತುಗಳೂ ಆತನ ಅನಂತ ರೂಪಗಳೇ. ಹೀಗಿರುವಾಗ ಮಣ್ಣು, ಕಲ್ಲು, ಲೋಹಗಳಿಂದಾದ ಮೂರ್ತಿಗಳು ಪರವಸ್ತುವನ್ನುಪಾಸನೆ ಮಾಡುವುದಕ್ಕೆ ಏಕೆ ಉಪಯೋಗವಾಗಬಾರದು? ಮಣ್ಣೂ ಪರವಸ್ತುವೇ, ಲೋಹವೂ ಪರವಸ್ತುವೇ. ಪರವಸ್ತು ಹೊರತು ಬೇರೆ ವಸ್ತುವಾವುದೂ ಇಲ್ಲ. ಒಂದು ನೀರಿನ ಬಿಂದುವೂ ಕೂಡ ಪರಾಶಕ್ತಿಯ ಸ್ವರೂಪ. ನಾವು

ಕುಡಿಯುವ ನೀರೂ ಪರಾಶಕ್ತಿ. ಒಳಹೊಕ್ಕು ದಾಹ ಶಮನವನ್ನು ಮಾಡು ವುದೂ ಪರಾಶಕ್ತಿಯೆ. ತುಳಸಿಮಾಲೆಯನ್ನು ಕೈಯಲ್ಲಿ ಹಿಡಿದು ಹರಿ ನಾಮೋಚ್ಚರಣೆಯನ್ನು ಮಾಡಿದರೆ ಒಂದೊಂದು ತುಳಸಿಮಣಿಯೂ ಹರಿಸ್ವರೂಪವೇ ಆಗುತ್ತದೆ" ಎಂದರು ಪರಮಹಂಸರು.

ಕಗ್ಗತ್ತಲೆಯಿಂದ ಆಕಾಶವನ್ನಾವರಿಸಿ ವಜ್ರಾಯುಧವನ್ನು ಬೀಸಿ ಗುಡುಗು ಮಿಂಚುಗಳನ್ನು ಕಾರುವ ಕಾರ್ಮೋಡದಲ್ಲಿ ಪರಾಶಕ್ತಿಯಿರುವಳು. ಆ ಮೇಘ ಪರ್ವತಗಳ ಮೇಲೆ ಮಳೆಯಾಗಿ ವರ್ಷಿಸಿ ದೊಡ್ಡ ನದಿಯಾಗಿ ಗಾಂಭೀರ್ಯದಿಂದ ಹರಿಯುವಾಗ ಅದರಲ್ಲೂ ಪರಾಶಕ್ತಿಯಿರುವಳು. ನದೀ ತೀರದಲ್ಲಿ ಭಕ್ತನು ಸಂಧ್ಯಾವಂದನೆಯನ್ನು ಮಾಡುತ್ತಾ, "ಜಲವೇ! ನಿನ್ನಲ್ಲಿ ಉಕ್ಕುವ ಶಕ್ತಿ ನನ್ನಲ್ಲಿ ವ್ಯಾಪಿಸಿ ನನಗೆ ಶಕ್ತಿಯನ್ನುಂಟುಮಾಡಲಿ. ಜಲವೇ! ನನ್ನ ಕಣ್ಣುಗಳಿಗೆ ವಿಶಾಲದೃಷ್ಟಿಯನ್ನು ಅನುಗ್ರಹಿಸಲಿ! ತಾಯಿ ಪ್ರಿಯಕಂದನನ್ನು ಪ್ರೇಮೋದ್ರೇಕದಿಂದ ಸಾಕಿಸಲಹುವಂತೆ, ಜಲವೇ, ನಿನ್ನ ಮಂಗಳಕರವಾದ ಮಾಧುರ್ಯ ಪ್ರಾಣ ಶಕ್ತಿಗಳು ನನ್ನನ್ನು ಪೋಷಿಸಲಿ! ಜಲವೇ! ನೀನು ಹರಿಯುವೆಡೆಯೆಲ್ಲಾ ಪವಿತ್ರ ಮಾಡಿ ಮರೆಯಾಗುತ್ತೀಯೆ. ಎಲ್ಲವನ್ನೂ ತೊಳೆದು ಶುದ್ಧಮಾಡಿದನಂತರ ನೀನು ಒಣಗಿ ಅದೃಶ್ಯವಾಗು ತ್ತೀಯೆ. ಈ ಗುಣವನ್ನು ನನಗೂ ಅನಗ್ರಹಿಸಿ, ನನ್ನನ್ನು ಪವಿತ್ರಗೊಳಿಸು! ಇಗೋ, ನಿನ್ನನ್ನು ಶರಣುಹೊಂದಿದೆ" ಎಂದು ತಲೆಯಮೇಲೆ ನೀರನ್ನು ಪ್ರೋಕ್ಷಿಸಿಕೊಂಡು, ಕೈಯಲ್ಲಿ ಆಚಮನಕ್ಕೆ ನೀರನ್ನು ತೆಗೆದುಕೊಂಡು, "ಅನಂತವಾದ ಪರವಸ್ತುವೆ! ನಿನ್ನನ್ನು ನಮಸ್ಕರಿಸುವೆನು" ಎಂದು ಹೇಳಿ ಆ ನೀರನ್ನು ಕುಡಿಯುತ್ತಾನೆ. ಆ ನೀರೂ ಪರಾಶಕ್ತಿಯೆ.

* * * *

ಎಲ್ಲೆಲ್ಲೂ ದೇವರಿದ್ದಾನೆ ಎಂಬ ಸತ್ಯವನ್ನು ನಾವು ನಿಜವಾಗಿಯೂ ಅರಿತಿದ್ದರೆ, ಮನಸ್ಸನ್ನು ಧ್ಯಾನದಲ್ಲಿ ನಿಲ್ಲಿಸುವುದಕ್ಕೆ ಸಾಧನವಾಗಿ ಏಕೆ ಒಂದು ದಿವ್ಯ ಮೂರ್ತಿಯನ್ನಿಟ್ಟು ಆರಾಧಿಸಬಾರದು? ಎಲ್ಲೆಲ್ಲೂ ವ್ಯಾಪಿ ಸಿರುವವನು ಆ ಮೂರ್ತಿಯಲ್ಲಿಲ್ಲದೆ ಹೋಗುವನೇ? ವಿಗ್ರಹಾರಾಧನೆಯನ್ನು ಮಾಡದವರು ಮಾಡಬೇಕಾಗಿಲ್ಲ. ಆದರೆ ಮಾಡುವವರನ್ನು ಅಲ್ಲಗಳೆಯು ವುದು ಮೂಢತನವೇ ಸರಿ. ಈಶ್ವರ ಸರ್ವ ವ್ಯಾಪಕ. ಪರಾಶಕ್ತಿಯು ಸಕಲ ವಸ್ತುಗಳಲ್ಲಿಯೂ ನೆಲೆಸಿರುವಳು. ನಾವು ತಿನ್ನುವ ಆಹಾರದಲ್ಲಿ

ಒಂದು ಅಗುಳನ್ನು ತೆಗೆದಿಟ್ಟು ಪೂಜಿಸಬಹುದು. ಪೂಜೆ ಮಾಡಿದನಂತರ ಆಹಾರವನ್ನು ಉಂಡರೆ ಪರಾಶಕ್ತಿ ನಮ್ಮೊಳಗೆ ನಿಂತು ಅನುಗ್ರಹಿಸುವಳು.

* * * *

ನಾವು ಆರಾಧಿಸಿ ಪೂಜಿಸುವ ಮೂರ್ತಿಯು ಒಂದು ಚಿಹ್ನೆ ಮಾತ್ರವಲ್ಲ. ಎಲ್ಲೆಲ್ಲೂ ಇರುವ ಈಶ್ವರನು ಆ ವಿಗ್ರಹದಲ್ಲೂ ನೆಲೆಸಿರುವನು. ಪೂಜೆಗಾಗಿ ಮಾಡಿಟ್ಟುಕೊಂಡು ವಿಗ್ರಹವನ್ನು ನಮ್ಮ ಹಿರಿಯರು "ಅರ್ಚಾವತಾರ" ವೆಂದು ಕರೆದು ಆ ಮೂರ್ತಿಯನ್ನೊಂದು ಅವತಾರವಾಗಿಯೇ ಭಾವಿಸಿದರು; ರಾಮ, ಕೃಷ್ಣರ ಹಾಗೆ ಈ ಮೂರ್ತಿಯೂ ಒಂದು ಅವತಾರ. ಕಂಭದಲ್ಲೂ, ಮತ್ಸ್ಯಾಕಾರದಲ್ಲೂ, ಹಂದಿಯರೂಪದಲ್ಲೂ, ದಶರಥನ ಮಗನಲ್ಲೂ, ಅವತರಿಸಿದ ಹಾಗೆಯೇ ತಿರುವರಂಗದ ದೇವಾಲಯದಲ್ಲೂ, ತಿರುಪತಿಯಲ್ಲೂ ಈಶ್ವರನು ನಮ್ಮ ಭಕ್ತಿಗೊಳಗಾಗಿ ಅವತರಿಸಿ ನಿಂತಿರುವನು. ಪರಿಪೂರ್ಣವಾದ ವೇದಾಂತಜ್ಞಾನವನ್ನು ಪಡೆದ ಆಳ್ವಾರುಗಳೂ, ನಾಯನಾರುಗಳೂ, ಆಚಾರ್ಯರೂ ಕೂಡ ಆ ತಿರುಪತಿಯಲ್ಲಿ ದೇವರನ್ನು ಕಂಡರು; ಮನಸ್ಸನ್ನು ಸ್ಥಿರಗೊಳಿಸಿ ಏಕಾಗ್ರ ಚಿತ್ತದಿಂದ ಧ್ಯಾನಿಸಿ, ಹಾಡುತ್ತಲೂ ಆಡುತ್ತಲೂ ತಮ್ಮ ಆನಂದಾನುಭವವನ್ನು ವ್ಯಕ್ತಗೊಳಿಸಿದರು.

ಬೀದಿಯಲ್ಲಿ ಮಕ್ಕಳು ಆಟವಾಡುತ್ತಾ, ತಿರುವರಂಗ ದೇವಸ್ಥಾನವನ್ನೂ ಅದರಲ್ಲಿ ಮಲಗಿರುವ ಮೂರ್ತಿಯನ್ನೂ ಮಣ್ಣಿನಲ್ಲಿ ಗೀಟೆಳೆದು ತೋರಿಸಿದ ಮಾತ್ರಕ್ಕೆ, ಆಗ ಭಿಕ್ಷಾಟನದಿಂದ ಜೀವಿಸುತ್ತಿದ್ದ ರಾಮಾನುಜರು ಕೆಳಗೆ ಬಿದ್ದು ನಮಸ್ಕರಿಸಿ ಸರ್ವೇಶ್ವರನನ್ನು ಧ್ಯಾನಿಸಿದರೆಂದು ಒಂದು ಕಥೆಯನ್ನು ಹೇಳುತ್ತಾರೆ. ನಾವು ಸೃಷ್ಟಿಸಿದ ವಿಗ್ರಹಗಳಲ್ಲೂ ಚಿತ್ರಗಳಲ್ಲೂ ದೇವರಿಲ್ಲವೆಂದು ಎಣಿಸುವುದು ಅಜ್ಞಾನವೇ ಸರಿ.

ಚೇತನಾಚೇತನಗಳೆಲ್ಲಾ ಬ್ರಹ್ಮಮಯವೆಂದು ಕಂಡ ಬಳಿಕ ಪೂಜೆಯ ಸಲುವಾಗಿಟ್ಟುಕೊಂಡ ವಿಗ್ರಹ ಮಾತ್ರ ಏಕೆ ಪರವಸ್ತುವಿನ ಸ್ವರೂಪವಾಗಕೂಡದು? ಅಲ್ಲವೆಂದು ಹೇಳುವವರು ನಿಜವಾಗಿಯೂ ಬ್ರಹ್ಮವನ್ನು ಪ್ರತ್ಯೇಕಿಸಿ ಬೇರೆ ಲೋಕದಲ್ಲಿಡುವರೇನು? ವಾದ ಪ್ರತಿವಾದಗಳಲ್ಲೆಲ್ಲಾ ಪರವಸ್ತುವಿನ ಸರ್ವವ್ಯಾಪಕ ಸ್ವರೂಪವನ್ನು ಒತ್ತಿ ಹೇಳಿ ಮಾತಾಡುತ್ತಾರೆಯೇ ಹೊರತು ಅವರು ಭಗವಂತನ ಸರ್ವ ವ್ಯಾಪಕತ್ವವನ್ನು ನಂಬುವುದಿಲ್ಲವೆಂದು ತೋರುತ್ತದೆ. ಜ್ಞಾನ ಭಕ್ತಿಗಳಿಂದ ಚಿತ್ತವನ್ನು ಏಕಾಗ್ರಗೊಳಿಸಿ ಬ್ರಹ್ಮ

ವನ್ನು ಧ್ಯಾನಿಸಿ ಪೂಜಿಸಬಹುದು. ಆದರೆ ಇದು ಎಲ್ಲರಿಗೂ ಸಾಧ್ಯವಿಲ್ಲ. ಸಾಧ್ಯವೆಂದು ತೋರಿದರೂ ಅದು ಒಂದು ವಿಧವಾದ ಭ್ರಮೆ, ಇಲ್ಲ ಅಹಂಕಾರ. ಅಚೇತನ ಲಿಂಗವನ್ನಿಟ್ಟು ಅದರ ಮೂಲಕ ಎಲ್ಲೆಲ್ಲೂ ತುಂಬಿ ನಿಂತಿರುವ ಪರವಸ್ತುವನ್ನು ಧ್ಯಾನಿಸುವುದು ಎಲ್ಲರಿಗೂ ಸಾಧ್ಯವಾದ ಒಂದು ವಿಧಾನ.

ಈ ವಿಧಾನವನ್ನು ಅಲ್ಲಗಳೆಯುವುದು ಸರಿಯಲ್ಲ. ಭಗವಾನ್ ಶ್ರೀ ರಾಮಕೃಷ್ಣರೂ, ಶಂಕರ, ರಾಮಾನುಜ, ಮಧ್ವಾಚಾರ್ಯರೂ, ಪಾಶ್ಚಾತ್ಯ ದೇಶಗಳಲ್ಲಿ ಹಲವಾರು ಕ್ರೈಸ್ತ ಜ್ಞಾನಿಗಳೂ ಭಕ್ತರೂ ಕೂಡ ಅರ್ಚಾವತಾರ ಪೂಜೆಯನ್ನವಲಂಬಿಸಿ ಶಾಂತಿಯನ್ನೂ ಎಂದೂ ಅಳಿಯದ ಆನಂದವನ್ನೂ ಪಡೆದಿದ್ದಾರೆ ಎಂಬುದು ಪ್ರಸಿದ್ಧ ವಿಷಯ. ಆದ್ದರಿಂದ ಅರ್ಚನೆಯ ಸಲುವಾಗಿ ಕಲ್ಲು, ಮರ ಮುಂತಾದ ಅಚೇತನ ವಸ್ತುಗಳನ್ನಿಟ್ಟುಕೊಂಡು ನಾವೂ ಪರವಸ್ತುವನ್ನು ಧ್ಯಾನಿಸಿ ಲಾಭವನ್ನು ಪಡೆಯಬಹುದು.

## ೧೭

## ಭಜಗೋವಿಂದಂ

"ಮಗೂ! ನಿದ್ದೆಮಾಡು" ಎನ್ನುತ್ತಾಳೆ ತಾಯಿ. "ನಾನು ನಿದ್ದೆ ಮಾಡಿದೆ ಅಮ್ಮಾ!" ಎನ್ನುತ್ತದೆ ಮಗು. ತಾಯ ಮೇಲಿನ ಸ್ನೇಹದಿಂದಲೂ "ನಿದ್ದೆ" ಯೆಂದರೇನು ಎಂಬುದೇ ಮಗುವಿಗೆ ಗೊತ್ತಿಲ್ಲವಾದ್ದರಿಂದಲೂ ಅದು ಹಾಗೆ ಹೇಳುತ್ತದೆ. ಸಮಾಧಿ ನೆಲೆಯನ್ನು ಮುಟ್ಟದ ಒಬ್ಬನು ಪುಸ್ತಕಗಳನ್ನೋದಿ "ಶಿವೋಹಂ" ಎಂದು ಹೇಳುವುದೂ ಹೀಗೆಯೇ ಸರಿ. ಮಗು ನಿಜವಾಗಿಯೂ ಮಲಗಿದ್ದರೆ, "ಮಲಗಿದೆ" ಎಂದು ಅದು ಹೇಳುವುದಕ್ಕಾದೀತೆ?

ನಾವು ಎಷ್ಟೇ ಅಲ್ಲವೆಂದರೂ "ನಾನು" ಎಂಬ ಭಾವನೆ ಮನಸ್ಸಿನಲ್ಲಿ ಬೇರೂರಿ ನಿಂತಿರುತ್ತದೆ. ಹಾಗಿರುವವರಿಗೆ ನಿರ್ಗುಣ ಬ್ರಹ್ಮ ಹೇಗೆ ಪ್ರಯೋಜನಕಾರಿಯಾಗಬಲ್ಲುದು? ಪರವಸ್ತುವನ್ನು ಈಶ್ವರನೆಂದು ಭಾವಿಸಿ, ಜಗತ್ತೆಲ್ಲಾ ಅವನ ಲೀಲೆಯೆಂದೆಣಿಸಿ ಭಕ್ತಿಯಿಂದ ಭಗವಂತನನ್ನಾರಾಧಿಸುವುದೇ ಸರಿಯಾದ ಮಾರ್ಗ. ಹಾಗೆ ಮಾಡುತ್ತಿದ್ದರೆ "ನಾನು" ಎಂಬ ಭಾವನೆ ಮಾಗಿ ಪಕ್ವವಾದ ಹಣ್ಣಿನಂತಾಗಿ ಕಡೆಗೆ ಬಿದ್ದುಹೋಗುತ್ತದೆ.

ನಾವು ಪಡೆಯದ ಜ್ಞಾನವನ್ನು ಪಡೆದಿದ್ದೇವೆಂದು ಎಣಿಸುವುದರಿಂದ ಯಾವ ಪ್ರಯೋಜನವೂ ಇಲ್ಲ.

ಪರಮಹಂಸರು ತಮ್ಮನ್ನು ಕುರಿತು ಅದ್ವೈತ ಪಂಡಿತರೊಬ್ಬರಿಗೆ ನಮ್ರತೆಯಿಂದ ಹೇಳುತ್ತಾರೆ:

"'ನಾನು' ಎಂಬ ಅಜ್ಞಾನದ ಸ್ವಾಭಿಮಾನ ನನ್ನನ್ನು ಬಾಧಿಸುತ್ತಿರುವವರಿವಿಗೂ ನನಗೆ ಬ್ರಹ್ಮ ಸಗುಣವೇ ಆಗಿರುತ್ತದೆ. ಸರ್ವೇಶ್ವರನನ್ನು ಧ್ಯಾನಿಸಿ ಭಕ್ತಿಯಿಂದ ಪೂಜಿಸುವುದರಲ್ಲೇನು ತಪ್ಪು? ದೇವಿಯನ್ನು ನಾನು ಆರಾಧಿಸುತ್ತೇನೆ. ಅವಳು ಹಲವಾರು ಜೀವರಾಶಿಗಳಾಗಿ, ಜಗತ್ ಸ್ವರೂಪಳಾಗಿ ನನಗೆ ಕಾಣಿಸಿಕೊಳ್ಳುತ್ತಾಳೆ. ಭಗವತಿಯೂ ಈಶ್ವರನೂ ಒಂದೇ. ವಜ್ರವೂ, ವಜ್ರದ ಕಾಂತಿಯೂ ಬೇರೆ ಬೇರೆಯಲ್ಲ ಸೂರ್ಯನೂ ಬಿಸಿಲೂ ಒಂದೇ. ಒಂದಿಲ್ಲದೆ ಮತ್ತೊಂದನ್ನು ಕಾಣುವುದಕ್ಕಾಗುವುದಿಲ್ಲ. ನಾನು ಪೂಜಿಸುವ ದೇವಿ ಸಗುಣ ನಿರ್ಗುಣಗಳನ್ನೊಳಗೊಂಡ ಅದ್ವೈತ ಬ್ರಹ್ಮವೇಯಲ್ಲದೆ ಬೇರಲ್ಲ. 'ಶಿವೋಹಂ' ಎಂದು ಬಾಯಿಂದ ಹೇಳಿದ ಮಾತ್ರಕ್ಕೆ ಏನು ಪ್ರಯೋಜನ? ಭಕ್ತಿ ಮಾರ್ಗದಲ್ಲಿ 'ನಾನು' ಎಂಬ ಅಹಂಕಾರ ಸಂಪೂರ್ಣವಾಗಿ ಬತ್ತಿಹೋದ ಮೇಲೆ, ಶಿವೋಹಂ. ಅದು ವರೆವಿಗೆ ನಾನು ಭಗವಂತನ ಸೇವಕ, ಆತನ ಆಜ್ಞೆಯನ್ನು ನಡೆಸುವ ಯಂತ್ರ."

* * * *

ಒಬ್ಬ ಸಾಧು ಒಂದು ಪವಿತ್ರ ಕ್ಷೇತ್ರಕ್ಕೆ ಬಂದು ಅದ್ವೈತ ಉಪನ್ಯಾಸಗಳನ್ನು ಸಮೃಧ್ಧಿಯಾಗಿ ಮಾಡುತ್ತಿದ್ದರು. ಆ ಸಮಯದಲ್ಲಿ ಅಲ್ಲಿಗೆ ಬಂದಿದ್ದ ಶ್ರೀ ರಾಮಕೃಷ್ಣರು ಸಾಧುವಿನ ವಿಚಾರವಾಗಿ ಕೆಟ್ಟ ಸಮಾಚಾರಗಳನ್ನು ಕೇಳಿದರು. ಬಳಿಕ ಒಂದು ದಿನ ಸಾಧುವನ್ನು ಭೇಟಿಯಾದಾಗ ಪರಮಹಂಸರು, "ಏನು, ಸ್ವಾಮೀಜಿ! ವೇದಾಂತವನ್ನು ಹಾಗೆಯೇ ಹಿಂಡಿಸುರಿಯುತ್ತೀರಲ್ಲಾ! ಆದರೆ ಊರಿನಲ್ಲಿ ತಮ್ಮ ವಿಚಾರವಾಗಿ ಏನೇನೋ ಹೇಳಿಕೊಳ್ಳುತ್ತಾರೆ, ಅದರ ಸತ್ಯವೇನು?" ಎಂದು ಕೇಳಿದರು. ಅದಕ್ಕೆ ಸನ್ಯಾಸಿ:

"ಆದರಿಂದೇನು? ನೆರಳು ನೆರಳೊಡನೆ ಕ್ರೀಡಿಸುತ್ತದೆ; ಅದರಿಂದ ವೇದಾಂತಜ್ಞಾನಿಗಳಿಗೇನು? ಜಗತ್ತೆಂಬುದೇ ಮಾಯೆ. ಈ ಪ್ರಪಂಚವೇ ಸುಳ್ಳಾಗಿರುವಾಗ, ನನ್ನೀ ದೇಹದ ಕಾಮ ಚೇಷ್ಟೆಗಳು ಮಾತ್ರ ನಿಜವೇನು?

ಎಲ್ಲಾ ಮರೀಚಿಕೆ, ತೋರಿಕೆ ಮಾತ್ರ. ಇದಕ್ಕೆಲ್ಲಾ ವೇದಾಂತಜ್ಞಾನಿಗಳಾದ ತಾವೇಕೆ ತವಕ ಪಡುತ್ತೀರಿ'' ಎಂದನು.

ಇದನ್ನು ಕೇಳಿ ಶ್ರೀರಾಮಕೃಷ್ಣರಿಗೆ ಸಹಿಸಲಾರದ ಜಿಗುಪ್ಸೆಯುಂಟಾಯಿತು.

“ನಿಮ್ಮ ವೇದಾಂತ ಜ್ಞಾನವನ್ನೆಲ್ಲಾ ಬೆಂಕಿಯಲ್ಲಿ ಹಾಕಿ. ನಿಮ್ಮ ವಿದ್ಯೆಯೆಲ್ಲಾ ಸುಳ್ಳು. ಜನರನ್ನು ಮೋಸಗೊಳಿಸಿ ಇಂದ್ರಿಯ ತೃಪ್ತಿಗೆ ದಾರಿ ಹುಡುಕಿರುವಿರಿ'' ಎಂದವರನ್ನು ಖಂಡಿಸಿದರು. ಭಕ್ತಿಯಿಲ್ಲದ ವೇದಾಂತ ಮಾಯಾವಾದ ಬಹಳ ಅಪಾಯಕಾರಿ.

* * * *

ದುರ್ಯೋಧನನೂ ಕೂಡ ಒಂದು ಸಲ “ದೇವರು ನನ್ನ ಮನಸ್ಸಿನಲ್ಲಿ ವಾಸವಾಗಿದ್ದಾನೆ. ಅವನೇ ನನ್ನನ್ನು ಹೀಗೆ ಮಾಡುವಂತೆ ಪ್ರೇರೇಪಿಸುತ್ತಾನೆ. ನನ್ನ ಕೆಲಸವಾವುದಕ್ಕೂ ನಾನು ಹೊಣೆಯಲ್ಲ. ನನ್ನನ್ನೇಕೆ ದೂಷಿಸುವಿರಿ ?'' ಎಂದನಂತೆ !

ಒಬ್ಬನು ದೇವರ ಗುಲಾಮನಾಗಿ, ತಾನು ಮಾಡುವುದೆಲ್ಲಾ ಭಗವಂತನ ಚಿತ್ತವೆಂದು ನಿಜವಾಗಿಯೂ ಭಾವಿಸಿದರೆ ಆತ ಹೇಗೆ ಪಾಪಕಾರ್ಯವನ್ನು ಮಾಡುವನು? ಅವನ ಪವಿತ್ರ ಮನಸ್ಸಿನಲ್ಲಿ ಸ್ವಾರ್ಥ, ಪಾಪ ಯೋಚನೆಗಳಿಗೆ ಸ್ಥಳವೆಲ್ಲಿಯದು? ಭರತನಾಟ್ಯದಲ್ಲಿ ಉತ್ತಮ ಶಿಕ್ಷಣವನ್ನು ಪಡೆದವಳು ತಪ್ಪು ಹೆಜ್ಜೆಯನ್ನಿಡುವಳೆ? ಅವಳ ಕಾಲುಗಳು ಅವಳರಿವಿಲ್ಲದೆಯೇ ತಾಳಕ್ಕನುಗುಣವಾಗಿ ನೃತ್ಯ ಮಾಡುತ್ತವೆ. “ನಾನು ಭಗವಂತನ ಸೇವಕ, ಅವನಿಚ್ಛೆಯಂತೆಯೇ ಕೆಲಸ ಮಾಡುತ್ತೇನೆ,'' ಎಂಬ ಪವಿತ್ರ ಭಾವನೆ ಬೇರೂರಿ ನಿಂತರೆ ಆ ಹೃದಯದಲ್ಲಿ ಯಾವ ವಿಧದ ಕೆಟ್ಟ ಯೋಚನೆಗಳೂ ಅಂಟುವುದಿಲ್ಲ. ಇದನ್ನು ಮರೆತು ಕೆಲವು ಕಲಿತ ಮೂಢರು, ಶಾಸ್ತ್ರ ಸೂತ್ರಗಳನ್ನು ಮೋಸ ಪಾಪಗಳಿಗೆ ಸಾಧನವಾಗಿ ಉಪಯೋಗಿಸುತ್ತಾರೆ. “ಜಗತ್ತೇ ಮಾಯೆ; ಆದ್ದರಿಂದ ನಾವು ಇಂದ್ರಿಯ ಸುಖಗಳನ್ನನುಭವಿಸುವುದರಲ್ಲೇನು ಪಾಪವಿದೆ ?'' ಎಂದು ತಮ್ಮನ್ನು ತಾವೇ ಮೋಸಗೊಳಿಸುತ್ತಾರೆ. ಜ್ಞಾನಾನುಭವಕ್ಕೆ ಬರದ ಅದ್ವೈತ ಮಾತುಗಳನ್ನು ಬಿಟ್ಟು, ಭಕ್ತಿ ಮಾರ್ಗದಲ್ಲಿ ನೆಲೆಸುವುದೇ ಶ್ರೇಷ್ಠ.

ಉಪನಿಷತ್ತು, ಬ್ರಹ್ಮಸೂತ್ರ, ವೇದಾಂತ ಸಾಗರದ ದಡವನ್ನು

ಮುಟ್ಟಿದ ಶ್ರೀ ಶಂಕರಭಗವತ್ಪಾದಾಚಾರ್ಯರೇ ಇಡೀ ಜಗತ್ತನ್ನೇ ಆಶ್ಚರ್ಯಗೊಳಿಸಿದ ತಮ್ಮ ಜ್ಞಾನಮಯವಾದ ಮತಿಯನ್ನು ಕುರಿತು,

"ಮೂಢಮತಿಯೇ! ಗೋವಿಂದನನ್ನು ಸ್ತುತಿಸು! ಗೋವಿಂದನನ್ನು ಭಜಿಸು!" ಎಂದು ಹಾಡಿದ್ದಾರೆ. ಶಂಕರಾಚಾರ್ಯರು ಹೀಗೆ ಹೇಳಿರುವಾಗ, ನಾವೆಲ್ಲಾ ಎಷ್ಟರವರು?

೧೮

## ಧಾರ್ಮಿಕ ಸುಧಾರಣೆ

ನಮ್ಮ ದೇಶದಲ್ಲಿ ಅನೇಕ ಪ್ರಖ್ಯಾತ ಮಹಾತ್ಮರು ಅವತರಿಸಿ ನಮ್ಮ ಪೂಜಾವಿಧಾನಗಳನ್ನೂ ಆಚಾರಗಳನ್ನೂ ಆಗಿಂದಾಗ್ಯೆ ತಿದ್ದುಪಾಟು ಮಾಡಿರುತ್ತಾರೆ. ಆದರೆ ಕ್ರಮೇಣ ಅವರ ಉಪದೇಶಗಳ ಫಲವಾಗಿ ಹೊಸ ಸಂಪ್ರದಾಯಗಳೂ ಹೊಸ ಜಾತಿಭೇದಗಳೂ ಉಂಟಾಗಿ, ತಿದ್ದುಪಾಟಿಗೆ ಬದಲು ಹಲವಾರು ಪಂಗಡಗಳಾಗಿ ಜನರು ಭಾಗವಾಗಿ ಹೋಗಿರುವರು. ಸಮಾಜವನ್ನು ಉನ್ನತಸ್ಥಿತಿಗೆ ತರುವ ಸದುದ್ದೇಶದಿಂದ ಪ್ರಾರಂಭಿಸಿದ ತಿದ್ದುಪಾಟುಗಳೆಲ್ಲಾ ಜನರು ಬೇರೆಯಾಗುವುದಕ್ಕೂ, ಅಹಂಕಾರ ವೃದ್ಧಿಗೂ, ಒಬ್ಬರನ್ನೊಬ್ಬರು ಅಲ್ಲಗಳೆಯುವುದಕ್ಕೂ ಭಿನ್ನಾಭಿಪ್ರಾಯಗಳಿಗೂ ಕಾರಣಗಳಾಗಿ ನೆಲಿಸಿವೆ. ಪರಿಶೀಲಿಸಿ ನೋಡಿದರೆ ನಮ್ಮ ಮತಭೇದಗಳೆಲ್ಲಾ ತಿದ್ದುಪಾಟು ಪ್ರಯತ್ನಗಳಿಂದಲೇ ಉಂಟಾಗಿರುವುದನ್ನು ಕಾಣುತ್ತೇವೆ.

ಭಗವಾನ್ ಶ್ರೀ ರಾಮಕೃಷ್ಣರ ಉಪದೇಶಗಳೂ ಪ್ರಯತ್ನಗಳೂ ಈ ವಿಷಯದಲ್ಲಿ ದೋಷರಹಿತವಾಗಿವೆ. ಯಾವ ವಿಧಾನವನ್ನೂ ಯಾವ ಸಂಪ್ರದಾಯವನ್ನೂ ಅವರು ಖಂಡಿಸಲಿಲ್ಲ. ಎಲ್ಲಾ ವಸ್ತುಗಳಲ್ಲೂ ಬ್ರಹ್ಮವನ್ನು ಕಂಡ ಆ ಜ್ಞಾನಿಯು ಸಕಲ ವಿಷಯಗಳಲ್ಲೂ ಒಳ್ಳೆಯದನ್ನೇ ನೋಡಿದರು. ಅವರ ಉಪದೇಶದ ಫಲವಾಗಿ ಜನರು ಧರ್ಮ ಮಾರ್ಗದಲ್ಲಿ ಮುಂದುವರಿದರೇ ಹೊರತು ಹೊಸ ಸಂಪ್ರದಾಯಗಳಾಗಲಿ ಭಿನ್ನಾಭಿಪ್ರಾಯಗಳಾಗಲಿ ಉಂಟಾಗಲಿಲ್ಲ.

ಪೂರ್ಣಜ್ಞಾನಿಯಾದರೂ ಭಗವಾನ್ ಶ್ರೀ ರಾಮಕೃಷ್ಣರು ವಿಗ್ರಹಾರಾಧನೆ ಬೇಡವೆನ್ನಲಿಲ್ಲ. ಸಮಾಧಿ ನೆಲೆಯನ್ನು ಮುಟ್ಟಿದ ಅದ್ವೈತಿಯಾದರೂ ಸಾಧಾರಣವಾದ ದೇವಾಲಯ ಪೂಜಾಕ್ರಮಗಳನ್ನೂ ಗೌರವಿಸಿ

ಉಪದೇಶಿಸಿದರು. ಯಾವ ದೇವರನ್ನಾಗಲೀ ಯಾವ ಪೂಜಾ ವಿಧಾನ ವನ್ನಾಗಲಿ, ಎಲ್ಲವನ್ನೂ ಸಮಭಾವದಿಂದ ನೋಡಿ ಅದಕ್ಕನುಗುಣವಾಗಿ ಉಪದೇಶಮಾಡಿದರು.

ನಮ್ಮ ಹಿಂದೂ ಸಂಪ್ರದಾಯದಲ್ಲಿ ಉನ್ನತ ವೇದಾಂತವೂ, ಅದರ ಜೊತೆಯಲ್ಲಿ ಹಲವಾರು ಆಚಾರಗಳು ಉತ್ಸವಗಳೂ ಮಂತ್ರತಂತ್ರ ವಿಧಾನ ಗಳೂ ಇರುವುದಕ್ಕೆ ಕಾರಣವನ್ನು ಪರಮಹಂಸರು ಹೇಳುತ್ತಾರೆ:

"ಒಂದು ಬತ್ತದಕಾಳಿನಲ್ಲಿರುವ ಮುಖ್ಯವಾದ ವಸ್ತು ಅಕ್ಕಿ. ಅಕ್ಕಿ ಯನ್ನು ಮುಚ್ಚಿಕೊಂಡಿರುವ ಹೊಟ್ಟನ್ನು ತೆಗೆದ ಮೇಲೆಯೇ ಅಕ್ಕಿಯನ್ನು ಆಹಾರವಾಗಿ ಉಪಯೋಗಿಸುತ್ತೇವೆ. ಆದರೆ, ಹೊಟ್ಟನ್ನು ತೆಗೆದ ಅಕ್ಕಿ ಬಹಳ ಕಾಲ ನಿಲ್ಲುವುದಿಲ್ಲ. ಬೇಗ ಕೆಡುತ್ತದೆ. ಬತ್ತವನ್ನು ಇಟ್ಟರ ಬಹುದು. ಅಕ್ಕಿಯನ್ನು ಬಿತ್ತಿದರೆ ಪಯಿರಾಗುತ್ತದೆಯೆ? ಬತ್ತವನ್ನು ಬಿತ್ತಿದರೆ ಮಾತ್ರವೇ ಮೊಳಕೆ ಏಳುತ್ತದೆ. ಬತ್ತದ ಜೀವನ ಶಕ್ತಿಯು ಅಕ್ಕಿಯಲ್ಲೇ ಇದ್ದರೂ. ಅಕ್ಕಿಯು ಹೊಟ್ಟನಿಂದ ಮುಚ್ಚಲ್ಪಟ್ಟ ಬತ್ತವಾಗಿ ಭೂಮಿಯಲ್ಲಿ ನೆಲೆಸಿದರೆ ಮಾತ್ರ ಮೊಳಕೆಯಾಗುವುದು. ಹಾಗೆಯೇ ನಮ್ಮ ಧರ್ಮವನ್ನು ಸುರಕ್ಷಿತವಾಗಿ ಕಾಪಾಡುವುದಕ್ಕೂ, ಮತ್ತು ಆ ಧರ್ಮ ಜೀವಿತವಾಗಿ ಬೇರೂರಿ ಚಿಗುರಿ ಪಯಿರಾಗುವ ಸಲುವಾಗಿ ಹಲವು ಕ್ರಿಯೆ, ವಿಧಾನ, ಅನುಷ್ಠಾನ, ಉತ್ಸವ, ಅಕ್ಕಿಯ ಮೇಲಿನ ಹೊಟ್ಟಿನ ಹಾಗೆ ನಮ್ಮ ಧರ್ಮವನ್ನು ಭದ್ರವಾಗಿ ಮುಚ್ಚಿಕೊಂಡಿವೆ. ಅಡಿಗೆ ಮಾಡಿ ಊಟ ಮಾಡುವುದಕ್ಕೆ, ಹೊಟ್ಟು ಬೇಕಾಗಿಲ್ಲ, ಅಕ್ಕಿ ಮಾತ್ರವೇ ಸಾಕು: ಜ್ಞಾನ ವನ್ನು ಸಂಪಾದಿಸಿದವನಿಗೆ ಕ್ರಿಯಾವಿಧಿಗಳೂ ದೇವಾಲಯಗಳೂ ಆವಶ್ಯಕ ವಿಲ್ಲ. ಆದರೆ ಇವೆಲ್ಲಾ ಇಲ್ಲದೆ ವೇದಾಂತ ಜ್ಞಾನ ಮಾತ್ರ ಹಿಂದೂ ಧರ್ಮ ದಲ್ಲಿ ಇದ್ದರೆ ಅದು ಇಷ್ಟು ಕಾಲ ಸುರಕ್ಷಿತವಾಗಿದ್ದು ಪಯಿರಾಗುತ್ತಿರಲಿಲ್ಲ. ಬರಿಯ ಅಕ್ಕಿಯನ್ನು ಬಿತ್ತಿದರೆ ಅದು ಹೇಗೆ ಫಲಬಿಡದೆ ಹೋಗುವುದೊ ಹಾಗೆಯೆ ಕ್ರಿಯಾರಹಿತವಾದ ಧರ್ಮವೂ ಬಹಳ ಬೇಗ ಒಣಗಿ ನಾಶವಾ ಗುತ್ತಿತ್ತು.

"ದೇಹದಲ್ಲಿ ಗಾಯವುಂಟಾದರೆ ಅದು ವಾಸಿಯಾಗುವವರೆಗೆ ಅದನ್ನು ಕಾಪಾಡುವುದಕ್ಕೋಸ್ಕರ ಮೇಲೆ ಹಕ್ಕಳೆ ಕಟ್ಟುತ್ತದೆ. ಒಳಗೆ ಗಾಯ ವಿರುವವರಿವಿಗೂ ಹಕ್ಕಳೆಯೂ ಇರಬೇಕು. ಗಾಯ ಸಂಪೂರ್ಣವಾಗಿ ವಾಸಿಯಾಗುವ ಮೊದಲೇ ಹಕ್ಕಳೆಯನ್ನು ತೆಗೆಯಬಾರದು. ಹುಣ್ಣು

ಗುಣವಾದನಂತರ ತಾನಾಗಿಯೇ ಹಕ್ಕಳೆ ಒಣಗಿ ಬಿದ್ದು ಹೋಗುವುದು. ಜ್ಞಾನವುಂಟಾದ ಮೇಲೆ ಕ್ರಿಯೆ, ಅನುಷ್ಠಾನ, ಆಚಾರಗಳೆಲ್ಲಾ ತಾವಾಗಿಯೇ ಬಿಟ್ಟು ಹೋಗುತ್ತವೆ. ಜ್ಞಾನವನ್ನು ಪಡೆಯುವುದಕ್ಕೆ ಮೊದಲೇ ಅವನ್ನು ತ್ಯಜಿಸಿದರೆ, ಹುಣ್ಣು ವಾಸಿಯಾಗುವುದಕ್ಕೆ ಮೊದಲೇ ಪಕ್ಕಳೆಯನ್ನು ತೆಗೆದರೆ ಹೇಗೆ ಗಾಯ ಗುಣವಾಗುವುದಕ್ಕೆ ಅಡ್ಡಿಯಾಗುತ್ತದೆಯೊ, ಹಾಗೆಯೆ ಅಜ್ಞಾನತೊಲಗಿದ ಜ್ಞಾನಾನುಭವಕ್ಕೆ ಅಡ್ಡಿಯಾಗುತ್ತದೆ."

"ಆಚಾರ ನಿಯಮಗಳನ್ನೆಲ್ಲಾ ಲಕ್ಷಿಸಬೇಕಾದ್ದಿಲ್ಲ ಎಂದು ಕೆಲವು ಜ್ಞಾನಿಗಳು ಭಾವಿಸಬಹುದು. ಆದರೆ ಜ್ಞಾನ ಪೂರ್ಣವಾಗುವುದಕ್ಕೆ ಮೊದಲೇ ನಮ್ಮ ಆಚಾರ ವ್ಯವಹಾರಗಳನ್ನೆಲ್ಲಾ ಬಿಡುವುದು ಉಚಿತವಲ್ಲ. ಹೊಗೆ ಹಾಕಿ ಪಕ್ವಮಾಡಿದ ಹಣ್ಣು ಅಷ್ಟು ಸವಿಯಾಗಿರುವುದಿಲ್ಲ. ತಾನಾಗಿಯೇ ಮಾಗಿ ಪಕ್ವವಾದ ಹಣ್ಣಿನಲ್ಲಿ ಮಾತ್ರ ಯೋಗ್ಯವಾದ ಸವಿರುಚಿಗಳನ್ನು ಕಾಣುತ್ತೇವೆ."

* * * *

ಜ್ಞಾನಿಗಳಿಗೆ ಜಾತಿಭೇದ ಕಾಣಿಸುವುದಿಲ್ಲ. ಆದರೆ ಜ್ಞಾನದಿಂದುಂಟಾದ ಈ ಹಕ್ಕನ್ನು ಅವರು ಹೇಗೆ ಪ್ರಯೋಜನ ಪಡಿಸಿಕೊಳುತ್ತಾರೆ ಎಂಬುದಕ್ಕೆ ಶ್ರೀರಾಮಕೃಷ್ಣರು ಒಂದು ಕಥೆಯನ್ನು ಹೇಳುತ್ತಾರೆ:

ಕೃಷ್ಣಕಿಶೋರನು ಒಂದು ಸಲ ಬೃಂದಾವನಕ್ಕೆ ಯಾತ್ರೆ ಹೋದನು. ಬಹಳ ದೂರ ನಡೆದು ದಾಹವುಂಟಾಗಲು ಒಂದು ಭಾವಿಯ ಬಳಿ ಹೋದನು. ಅಲ್ಲಿ ಒಬ್ಬನು ಭಾವಿಯಿಂದ ಕೊಡದಲ್ಲಿ ತಣ್ಣೀರನ್ನು ಎತ್ತುತ್ತಿದ್ದ. "ಅಪ್ಪಾ, ಬಹಳ ದಾಹ; ದಯವಿಟ್ಟು ಸ್ವಲ್ಪ ನೀರು ಕೊಡು" ಎಂದು ಕೃಷ್ಣಕಿಶೋರನು ಅವನನ್ನು ಪ್ರಾರ್ಥಿಸಿದನು. ಅದಕ್ಕವನು, "ಅಯ್ಯಾ, ನಾನೋ ಜಾತಿಯಲ್ಲಿ ಹೊಲೆಯ, ತಾವು ಬ್ರಾಹ್ಮಣರು. ನಾನು ಮುಟ್ಟಿದ ನೀರನ್ನು ತಾವು ಹೇಗೆ ಕುಡಿಯುವಿರಿ?" ಎಂದನು.

"ಅಪ್ಪಾ! ನೀನು ಹರಿನಾಮವನ್ನು ಹೇಳಬಲ್ಲೆಯಾ?" ಎಂದು ಕೃಷ್ಣಕಿಶೋರನು ಕೇಳಿದನು.

"ಅದಕ್ಕೇನು, ಹೇಳುತ್ತೇನೆ!" ಎಂದು ಹೊಲೆಯನು ಉತ್ತರ ಕೊಟ್ಟನು.

"ಹಾಗಾದರೆ ಹರಿನಾಮೋಚ್ಚರಣೆಯನ್ನು ಮಾಡುತ್ತಾ ನೀರೆತ್ತಿ

ಕೊಡು, ಆ ನೀರನ್ನು ನಾನು ಕುಡಿಯುವುದರಲ್ಲಾವ ದೋಷವೂ ಇಲ್ಲ"
ಎಂದು ಅವನ್ನು ಹೇಳಿ ತನ್ನ ದಾಹವನ್ನು ತೀರಿಸಿಕೊಂಡನು.

ಹಿಂದೂ ಧರ್ಮದ ತಳಹದಿಯಾಗಿ ನಿಂತಿರುವ ಜ್ಞಾನ ಭಕ್ತಿ ಮಾರ್ಗಗಳನ್ನನುಸರಿಸಿ ಶ್ರೀರಾಮಕೃಷ್ಣರು ಹೇಗೆ ತಿದ್ದುಪಾಟುಗಳನ್ನು ಉಪದೇಶಿಸಿದರು ಎಂಬುದು ಇದರಲ್ಲಿ ಚೆನ್ನಾಗಿ ಎದ್ದು ಕಾಣುತ್ತದೆ.

* * * *

"ಈ ಕಾಲದಲ್ಲಿ ಮುಖ್ಯವಾದ ಅಂಶಗಳನ್ನು ಮಾತ್ರವೇ ಜನರು ಅಪೇಕ್ಷಿಸುತ್ತಾರೆ, ಸುಲಭವಾಗಿ ಬಿಡಲಾಗುವ ಅನಾವಶ್ಯಕವಾದ ಅಂಶಗಳು ಅವರಿಗೆ ಬೇಡ. ಆದ್ದರಿಂದ ವಿಧಿ ಸಂಸ್ಕಾರಗಳನ್ನೂ ಕ್ರಿಯೆಗಳನ್ನೂ ಸಾಧ್ಯವಾದಷ್ಟು ತೆಗೆದು ಹಾಕುವುದೇ ಒಳ್ಳೆಯದು" ಎಂದು ಕಾಲಕ್ಕನುಗುಣವಾಗಿ ಪರಮಹಂಸರು ಉಪದೇಶಿಸಿರುವರು.

ಹಿಟ್ಟನ್ನು ಮೊದಲು ಸ್ವಲ್ಪ ತಣ್ಣೀರಿನಲ್ಲಿ ಕಲೆಸಿ ಬಳಿಕ ಬಿಸಿನೀರಿಗೆ ಹಾಕಿ ಕುದಿಸಿದರೆ ಒಳ್ಳೆಯ ಗಂಜಿಯಾಗುವುದು. ಹಾಗೆ ಮಾಡದೆ ಹಿಟ್ಟನ್ನು ಹಾಗೆಯೇ ಕುದಿಯುವ ನೀರಿಗೆ ಹಾಕಿದರೆ ಹಿಟ್ಟು ಸರಿಯಾಗಿ ಕರಗದೆ ಉಂಡೆ ಕಟ್ಟುವುದು. ನಮ್ಮ ಹಿಂದೂ ಸಮಾಜ ಬಹಳ ದೊಡ್ಡ ಸಮಾಜ. ಅತಿ ಬಿಸಿಯಿಂದ ತಿದ್ದುಪಾಟುಗಳ ಪ್ರಯತ್ನ ಮಾಡಿದರೆ ಹಿಟ್ಟು ಉಂಡೆ ಕಟ್ಟುವ ಹಾಗೆ ಬೇರೆ ಬೇರೆ ಮತಗಳು ತಲೆದೋರುತ್ತವೆ. ತಿದ್ದುಪಾಟಿನ ಆವಶ್ಯಕತೆಯು ಸ್ಪಷ್ಟವಾಗಿದ್ದರೂ, ನಿಧಾನವಾಗಿ ಕ್ರಮೇಣ ಪ್ರಯತ್ನ ಮಾಡಿದರೆ ಮಾತ್ರ ಭಿನ್ನಾಭಿಪ್ರಾಯಗಳುಂಟಾಗದೆ ಪ್ರಯತ್ನ ಸಫಲವಾಗುತ್ತದೆ.

## ೧೯

## ನಿರಹಂಕಾರ

"ನಮ್ರತೆಯಿರಬೇಕು" ಎಂಬುದಾಗಿ ಜ್ಞಾನಿಗಳೆಲ್ಲಾ ಬೋಧಿಸುತ್ತಾರೆ. ನಮ್ರತೆಯೇ ಸಿದ್ಧಿಮಾರ್ಗವೆಂದು ತಿಳಿದು ವಿದ್ವಾಂಸರು ವಿನಯದಿಂದ ನಡೆದುಕೊಳ್ಳುತ್ತಾರೆ. ಆದರೆ ಈ ಕೃತಕ ನಿರಹಂಕಾರಕ್ಕಿಂತಲೂ, ಸತ್ಯಕ್ಕೆ ಭಯಪಟ್ಟು ಅದರ ಫಲವಾಗಿ ಮನಸ್ಸಿನಲ್ಲಿ ನೆಲೆಸುವ ನಿಜವಾದ ನಮ್ರಭಾವನೆಯೇ ಶ್ರೇಷ್ಠವಾದುದು. ಪರಿಶೀಲಿಸಿನೋಡಿದರೆ ನಾವಾಗಲಿ

ನಮ್ಮ ಐಶ್ವರ್ಯ ಅಥವಾ ವಿದ್ಯೆ, ಮತ್ತಿತರ ಭಾಗ್ಯಗಳಾಗಲಿ, ಎಷ್ಟರವು? ಯಾವುದೂ ಶಾಶ್ವತವಲ್ಲ. ಅಜ್ಞಾನದಿಂದ ಬಿಡುಗಡೆ ಹೊಂದಿದರೆ ಆ ಸತ್ಯಾನುಭವವೇ ನಮ್ರತೆಯನ್ನುಂಟುಮಾಡುವುದು.

ಬಡವನೊಬ್ಬನ ಮಗ, ತಾನು ಧನವಂತನ ಮಗನಲ್ಲ, ಕಡು ಬಡವ ಎಂಬ ವಿಷಯವನ್ನು ಅರಿತು ಅದಕ್ಕೆ ತಕ್ಕ ಹಾಗೆ ನಡೆದುಕೊಂಡರೆ ಅದು ಸತ್ಯಕ್ಕೆ ಭಯಪಡುವ ನಮ್ರತೆ. ಇದು ವಿವೇಕ. ಬೇರೆ ವಿಧವಾಗಿ ವರ್ತಿಸಿದರೆ ಅದು ಮೂಢತನ. ಹಾಗೆಯೇ, ಯಾರಾದರೂ ಸರಿ, ತಾನು ಎಷ್ಟೇ ದೊಡ್ಡ ಪದವಿಯಲ್ಲಿದ್ದರೂ, ಐಶ್ವರ್ಯವನ್ನು ಪಡೆದಿದ್ದರೂ, ಅದು ಶಾಶ್ವತವಲ್ಲವೆಂದರಿತು ವಿನಯದಿಂದ ವರ್ತಿಸುವುದೇ ಬುದ್ಧಿವಂತಿಕೆ. ನಿಜವನ್ನರಿತು ಅದಕ್ಕನುಗುಣವಾಗಿ ನಡೆದುಕೊಳ್ಳಬೇಕಾದುದು ಅತ್ಯಾವಶ್ಯಕ. ಅದಲ್ಲದೆ ಇತರರನ್ನು ಮೆಚ್ಚಿಸುವುದಕ್ಕಾಗಿ ಮಾತ್ರ ನಮ್ರತೆಯನ್ನು ತೋರಿಸಿದರೆ ಅದರಿಂದ ಪ್ರಯೋಜನವಿಲ್ಲ.

"ನಾನು ಬಹಳ ನೀಚ, ಪಾಪಿ; ನನಗೆ ತಾವು ವಿಮೋಚನ ಮಾರ್ಗವನ್ನು ತೋರಿಸಿಕೊಡಬೇಕು" ಎಂದೊಬ್ಬ ಶಿಷ್ಯ ಗುರುವನ್ನು ಕೇಳಿಕೊಂಡನು. ಗುರುವಿಗೆ ಗೊತ್ತು, ಈತನು ಹೇಳುವುದು ಸತ್ಯವಲ್ಲ, ಇದು ಸಂಪ್ರದಾಯವೆಂದೆಣಿಸಿ ಹೀಗೆ ಮಾತನಾಡುತ್ತಾನೆ ಎಂಬ ವಿಷಯ. ಇವನಿಗೆ ಜ್ಞಾನಪ್ರಕಾಶವನ್ನುಂಟುಮಾಡಬೇಕೆಂದು, ಗುರು, "ಸರಿ, ನೀನು ಹೋಗಿ ನಿನಗಿಂತ ಕೀಳಾದ ವಸ್ತುವೊಂದನ್ನು ನೋಡಿ ಬಾ" ಎಂದವನನ್ನು ಕಳುಹಿಸಿದರು. ಇದೇನು ಪ್ರಮಾದವೆಂದುಕೊಂಡು ಶಿಷ್ಯನು ಹೋದನು. ಆದರೆ ಎಲ್ಲೆಲ್ಲಿ ಹುಡುಕಿದರೂ ತಾನು ನೋಡಿದ ವಸ್ತುಗಳೆಲ್ಲಾ ತನಗಿಂತಲೂ ಮೇಲಾಗಿಯೇ ಇದ್ದ ಹಾಗೆ ಕಂಡು ಬಂದವು. ಯಾವುದನ್ನು ಪರಿಶೀಲಿಸಿದರೂ ಅದು ಪರಿಶುದ್ಧದಲ್ಲಿ ಮತ್ತು ಇತರರಿಗೆ ಉಪಯೋಗವಾಗುವುದರಲ್ಲಿ ತನಗಿಂತಲೂ ಉತ್ತಮವಾಗಿರುವುದನ್ನು ಶಿಷ್ಯನು ಕಂಡನು. ಯಾವುದನ್ನಾದರೂ ತೆಗೆದುಕೊಂಡು ಹೋಗಿ "ಇಗೋ, ಇದು ನನಗಿಂತಲೂ ಕೀಳು" ಎಂದರೆ ಗುರು ತನ್ನನ್ನು ಅಂಹಕಾರಿ, ಸ್ವಾಭಿಮಾನಿ ಎಂದು ತಿರಸ್ಕರಿಸಿದರೆ ಏನು ಮಾಡುವುದೆಂಬ ಭಯ ಬೇರೆ. ಅವನಿಗೆ ಏನು ಮಾಡುವುದಕ್ಕೂ ತೋಚಲಿಲ್ಲ.

ಮೂರನೆಯ ದಿನ ಕಾಡಿನಲ್ಲಿ ಮಲವಿಸರ್ಜನೆಯನ್ನು ಮಾಡುವುದಕ್ಕೆ ಹೋದಾಗ ಆತನಿಗೆ ಒಂದು ಯೋಚನೆ ಹೊಳೆಯಿತು. "ನನ್ನ ಮಲ

ನನಗಿಂತಲೂ ನೀಚವಾದ ವಸ್ತುವೆಂಬುದರಲ್ಲಿ ಸಂದೇಹವೇ ಇಲ್ಲ. ಇದನ್ನು ಗುರುವಿನೆಡೆಗೆ ತೆಗೆದುಕೊಂಡು ಹೋಗಿ, ಇದೊಂದು ನನಗಿಂತ ಕೀಳಾದುದು, ಮಿಕ್ಕವೆಲ್ಲಾ ಶ್ರೇಷ್ಠವಾದವು ಎನ್ನುತ್ತೇನೆ''—ಹೀಗೆಂದುಯೋಚಿಸಿ, ಇದ ರಿಂದ ಗುರುವಿಗೆ ತಾನು ನಿರಹಂಕಾರಿಯೆಂಬ ಅಭಿಪ್ರಾಯವುಂಟಾಗುವು ದೆಂದೆಣಿಸಿದನು.

ಹಾಗೆಯೇ ಒಂದು ತೆಂಗಿನ ಚಿಪ್ಪಿನಲ್ಲಿ ತಾನು ವಿಸರ್ಜಿಸಿದ ಮಲ ವನ್ನೆತ್ತುವುದಕ್ಕೆ ಹೋದ. ಆಗ ''ಹಾ! ಪಾಪಿ! ನನ್ನನ್ನು ಮುಟ್ಟ ಬೇಡ!'' ಎಂದೊಂದು ಧ್ವನಿ ಕೇಳಬಂತು.

ಮಲದಿಂದ ಅಶರೀರವಾಣಿಯೊಂದು ಕೇಳಿಸಿತು: ''ಸಾಕು, ಸಾಕು, ನೀನು ನನಗೆ ಮಾಡಿರುವ ಉಪಕಾರ. ಮಹಾ ಪಾಪಿಯಾದ ನೀನು ಪುನಃ ನನ್ನನ್ನು ಮುಟ್ಟಬೇಡ. ನಾನು ಒಂದು ಕಾಲದಲ್ಲಿ ಶುದ್ಧವಾದ ಫಲ ಆಹಾರಗಳಾಗಿದ್ದೆ; ದೇವರ ನೈವೇದ್ಯಕ್ಕೂ ಸಹ ಯೋಗ್ಯವಾಗಿದ್ದೆ. ನನ್ನನ್ನು ಕಂಡವರ ಬಾಯಲ್ಲಿ ನೀರೂರುವ ಹಾಗಿದ್ದೆ. ನನ್ನ ದುರದೃಷ್ಟ ವಶದಿಂದ ನಿನ್ನನ್ನು ಸೇರುವ ಹಾಗಾಯಿತು. ನೀನು ನನ್ನನ್ನು ಭಕ್ಷಿಸಿ ನಾನು ನಿನ್ನ ದೇಹವನ್ನು ಹೊಕ್ಕೊಡನೆ ನನಗೆ ಈ ಸ್ಥಿತಿಯುಂಟಾಯಿತು. ಅದಕ್ಕೆ ಮೊದಲು ನನ್ನನ್ನು ನೋಡಿದವರೆಲ್ಲಾ ನನ್ನ ಸವಿರುಚಿಗಳನ್ನು ಬಯಸಿದರು. ಈಗಲೋ ನನ್ನನ್ನು ಕಂಡವರೆಲ್ಲಾ ಮೂಗನ್ನು ಭದ್ರವಾಗಿ ಮುಚ್ಚಿಕೊಂಡು ದೂರಹೋಗುತ್ತಾರೆ. ಇದು ನಿನ್ನ ನೀಚ ಸ್ಪರ್ಶದಿಂದ ನನಗುಂಟಾಗಿರುವ ಗತಿ. ನಿನ್ನ ಗುಣವನ್ನು ಹೇಗೆ ವರ್ಣಿಸುವುದು! ದಯವಿಟ್ಟು ಪುನಃ ನನ್ನನ್ನು ಮುಟ್ಟಬೇಡ, ಮುಟ್ಟಿದರೆ ಇದಕ್ಕಿಂತ ಕೀಳು ಸ್ಥಿತಿಯುಂಟಾಗುತ್ತದೋ ಏನೋ! ಛೀ, ದೂರ ಹೋಗು!''

ಇದನ್ನು ಕೇಳಿದ ಶಿಷ್ಯನಿಗೆ ತನ್ನ ನ್ಯೂನತೆಯ ಅರಿವಾಯಿತು. ಗುರುವಿನೆಡೆ ಹೋಗಿ ''ನನಗಿಂತಲೂ ನೀಚವಾದ ವಸ್ತುವೇ ಇಲ್ಲ. ನಾನು ವಿಸರ್ಜಿಸಿದ ಮಲ ಕೂಡ ನನ್ನನ್ನು ದೂಷಿಸುತ್ತದೆ'' ಎಂದನು.



೨೦

## ಒಂದೂವರೆ ಆಣೆಯ ಬೆಲೆ

ಯೋಗಾಭ್ಯಾಸ, ಮತ್ತು ಕೆಲವು ಸಾಧನೆಯ ಪರಿಣಾಮವಾಗಿ ಕೆಲವು ಸಿದ್ಧಿಗಳನ್ನು ಪಡೆಯಬಹುದು. "ಸಿದ್ಧಿ" ಎಂದರೆ ಸಾಧಾರಣ ಜನರಿಂದಾಗದ ಕೆಲಸಗಳನ್ನು ಮಾಡುವ ಸಾಮರ್ಥ್ಯ. ಸಾಧಾರಣ ನಿಯಮವನ್ನು ಮೀರಿದ ಅತ್ಯದ್ಭುತ ಶಕ್ತಿಗಳು. ಈ ಸಿದ್ಧಿಗಳ ಮೂಲಕ ನೋಡುವವರು ಭ್ರಮಿಸುವಂತಹ ಕೆಲಸಗಳನ್ನು ಕೆಲವು ಯೋಗಿಗಳು ಮಾಡಿ ತೋರಿಸುವುದುಂಟು. ಇದರ ವಿಚಾರವಾಗಿ ಅವರ ಶಿಷ್ಯರು ದೊಡ್ಡ ಪ್ರಚಾರ ಮಾಡುವುದು ವಾಡಿಕೆ.

ಶ್ರೀ ರಾಮಕೃಷ್ಣ ಭಗವಾನರು ಈ ವಿಧವಾದ ಸಿದ್ಧಿಗಳನ್ನು ಪಡೆಯ ಲೆತ್ನಿಸುವುದೂ, ಪಡೆದನಂತರ ಅವುಗಳ ಮೂಲಕ ಜನರನ್ನು ಭ್ರಮೆ ಗೊಳಿಸುವುದೂ ಕೂಡದು ಎನ್ನುತ್ತಾರೆ.

"ಅಲ್ಲೊಬ್ಬ ಯೋಗಿಯು ಆಶ್ಚರ್ಯಕರವಾದ ಶಕ್ತಿಯನ್ನು ಪಡೆ ದಿದ್ದಾರೆ, ಬಂದು ನೋಡಿ!" ಎಂದು ಯಾರಾದರೂ ಹೇಳಿದರೆ, ಶ್ರೀರಾಮಕೃಷ್ಣರು.

"ಅಲ್ಲಿಗೆ ಹೋಗಬೇಡಿ; ಅದ್ಭುತ ಕೆಲಸಗಳನ್ನು ಮಾಡಿತೋರಿಸುವ ಯೋಗಿಗಳನ್ನು ದರ್ಶನಮಾಡಿದರೆ ಒಳ್ಳೆಯದಾಗುವುದೆಂದೆಣಿಸಿ ಅಲ್ಲಿಗೆ ಹೋಗಬೇಡಿ!" ಎಂದು ಹೇಳುತ್ತಿದ್ದರು.

ಸಿದ್ಧಿಯೋಗಗಳು ತೋರಿರುವ ಅದ್ಭುತ ಶಕ್ತಿಗಳೆಲ್ಲಾ ಮೋಸವೆಂದು ಶ್ರೀರಾಮಕೃಷ್ಣರು ಹೇಳಲಿಲ್ಲ. ಆದರೆ ಅದು ದೇವರನ್ನು ಪಡೆಯುವ ಮಾರ್ಗವಲ್ಲ. ಆ ಸಿದ್ಧಿಗಳನ್ನು ಸಂಪಾದಿಸುವುದು ದೇವರ ಪೂಜೆಯಲ್ಲ, ಎಂಬುದೇ ಅವರ ಉಪದೇಶ:

"ಈ ಶಕ್ತಿಗಳೆಲ್ಲಾ ಬ್ರಹ್ಮಸಾಧನದ ನೇರ ಮಾರ್ಗದಲ್ಲಿರುವ ಮುಳ್ಳು ಪೊದೆಗಳು. ಅವುಗಳಲ್ಲಿ ಸಿಕ್ಕಿಕೊಳ್ಳಬೇಡಿ. ಮಂತ್ರ ಬಲದಿಂದ ರೋಗ ವನ್ನು ಗುಣಪಡಿಸುವವರು, ಯೋಗ ಶಕ್ತಿಯ ಬಲದಿಂದ ಕೋರ್ಟು ಮೊಕ ದ್ದಮೆಗಳಲ್ಲಿ ಜಯವನ್ನು ಪಡೆಯುವವರು, ಇಂತಹ ಮಾಂತ್ರಿಕರನ್ನು ಬಿಟ್ಟು ದೂರ ಸರಿಯಿರಿ. ನಿಜವಾದ ಭಕ್ತರು ದೇವರ ಪಾದ ಕಮಲಗಳನ್ನು

ಬಿಟ್ಟು ಮತ್ತಾವುದನ್ನೂ ಬಯಸರು. ಭಕ್ತಿಯಿಂದಲೂ ಯೋಗಾಭ್ಯಾಸ ದಿಂದಲೂ ಸಂಯಮ ಇವುಗಳಿಂದ ಕೆಲವು ಶಕ್ತಿ ಪ್ರಾಪ್ತವಾಗುವುದು. ಆದರೆ ಈ ಶಕ್ತಿಗಳು ತಾವಾಗಿಯೇ ಸಿದ್ಧಿಸುತ್ತವೆ. ಅವನ್ನು ಸಂಪಾದಿಸ ಬೇಕೆಂಬಾಸೆಯಿಂದ ಭಕ್ತರು ಅಭ್ಯಾಸಮಾಡುವುದಿಲ್ಲ.

"ಊಟಮಾಡಿದನಂತರ ಮಲಮೂತ್ರಾದಿಗಳುಂಟಾಗಿ ಅವನ್ನು ವಿಸರ್ಜಿಸುತ್ತೇವೆ. ಆದರೆ ಮಲ ಬೇಕೆಂದು ಯಾರೂ ಊಟಮಾಡುವು ದಿಲ್ಲ! ಹಾಗೆಯೇ ಸಿದ್ಧಿಯನ್ನು ಪಡೆಯೋಣವೆಂದು ನಿಜವಾದ ಭಕ್ತರಾರೂ ಭಕ್ತಿಸಾಧನೆ ಯೋಗಸಾಧನೆಗಳನ್ನು ಮಾಡುವುದಿಲ್ಲ. ಸಿದ್ಧಿಗಳೆಲ್ಲಾ ಮಲಕ್ಕೆ ಸಮಾನ."

ಸಿದ್ಧಿಗಳನ್ನು ಪಡೆಯುವುದರಿಂದ ಅಹಂಕಾರವು ಹೆಚ್ಚುತ್ತದೆ, ಇದ ರಿಂದ ಭಕ್ತಿ ವೈರಾಗ್ಯಗಳಿಗೆ ಅಡ್ಡಿಯೇ ಅಲ್ಲದೆ ಭಗವಂತನನ್ನು ಸಾಧಿಸುವು ದಕ್ಕಾಗುವುದಿಲ್ಲ. ಆದುದರಿಂದ ಸಿದ್ಧಿಯನ್ನು ಯೋಗಮಲವೆಂದು ಶ್ರೀ ರಾಮಕೃಷ್ಣರು ಭಾವಿಸುತ್ತಾರೆ.

ಶ್ರೀರಾಮಕೃಷ್ಣರು ಹೇಳಿದ ಒಂದು ಕಥೆ:

ಒಬ್ಬ ಯೋಗಿಯು ಗುರುವಿನ ಬಳಿ ಹೋಗಿ, "ಸ್ವಾಮಿ, ನಾನು ಹದಿನಾಲ್ಕು ವರುಷಗಳ ಕಾಲ ಕಾಡಿನಲ್ಲಿ ತಪಸ್ಸುಮಾಡಿ ನೀರಿನ ಮೇಲೆ ನಡೆಯ ಬಲ್ಲ ಸಿದ್ಧಿಯನ್ನು ಪಡೆದಿದ್ದೇನೆ!" ಎಂದನು. ಅದಕ್ಕೆ ಗುರು:

"ಮಗನೇ! ಏಕೆ ಇಷ್ಟು ಶ್ರಮಪಟ್ಟೆ? ಹದಿನಾಲ್ಕು ವರುಷಗಳನ್ನು ವ್ಯರ್ಥಮಾಡಿದೆಯೆಲ್ಲಾ! ಒಂದೂವರೆ ಆಣೆಯನ್ನು ಕೊಟ್ಟರೆ ಹರಿಗೋಲಿ ನವರು ನಿನ್ನನ್ನು ಆಚೆ ದಡಕ್ಕೆ ಸೇರಿಸುವರು. ನೀನು ಪಡೆದ ಸಿದ್ಧಿಯ ಬೆಲೆ ಒಂದೂವರೆ ಆಣೆ ಮಾತ್ರ!" ಎಂದರು.

"ಸಿದ್ಧಿಗಳನ್ನು ಸಂಪಾದಿಸುವ ಆಸೆಯಿಂದ ಯಾರೂ ಕಾಲ ಕಳೆಯ ಬಾರದು. ಭಗವಂತನ ಪಾದಗಳನ್ನು ಮುಟ್ಟಬೇಕೆಂದು ಬಯಸಿ ಭಕ್ತಿ ಮಾರ್ಗವನ್ನು ಅನುಸರಿಸಿ. ಅದ್ಭುತಗಳನ್ನೆಸಗಿ ಜನರನ್ನು ಮುಗ್ಧಗೊಳಿ ಸುವ ಯೋಗಿಗಳ ಹತ್ತಿರ ಸುಳಿಯಬೇಡಿ" — ಇದೇ ಶ್ರೀರಾಮಕೃಷ್ಣರ ಉಪದೇಶ.

೨೧

# ಮೂಲವಸ್ತು

ಪ್ರಪಂಚದಲ್ಲಿ ಅತ್ಯಲ್ಪ ಭಾಗ ಮಾತ್ರ ನಮ್ಮ ಸಂಶೋಧನೆಗೆ ಒಳಪಡುತ್ತದೆ. ಒಂದು ಎಲ್ಲೆಯನ್ನು ಮೀರಿ ಯಾವ ಮೇಧಾವಿಯ ಬುದ್ಧಿಯೂ ಕೆಲಸಮಾಡುವುದಿಲ್ಲ. ಪರಿಶೀಲಿಸಬೇಕಾದ ರಹಸ್ಯಗಳೂ ಪರಿಶೀಲಿಸಿ ತಿಳಿಯಬಲ್ಲ ಬುದ್ಧಿಶಕ್ತಿಯೂ ಬುದ್ಧಿ ವಿಕಾಸವನ್ನು ಪಡೆಯುವುದಕ್ಕೆ ಮೂಲಯಂತ್ರವಾದ ಮನಸ್ಸೂ, ಇವೆಲ್ಲಾ ಬಿಡಿಸುವುದಕ್ಕಾಗದ ಸಮಸ್ಯೆಗಳು. ಪ್ರಶ್ನೆಯೊಳಗಿನ ಪ್ರಶ್ನೆಯಾಗಿಯೇ ಮುಗಿಯುತ್ತವೆ.

ಎಲ್ಲಾ ವಸ್ತುಗಳೂ, ಜೀವರಾಶಿಗಳೂ, ನಿರ್ಜೀವ ವಸ್ತುಗಳೂ, ಚೇತನಾಚೇತನಗಳೂ, ಒಂದೇ ಮೂಲವಸ್ತುವಿನ ವಿಕಾರಗಳು.

ನೀರಿನ ಮೇಲೆ ಕಾಣಿಸುವ ಬುದ್ಬುದಗಳೂ ನೀರೂ ಒಂದೇ ವಸ್ತು. ನೀರಿನಲ್ಲಿ ಹುಟ್ಟಿ, ನೀರಿನಲ್ಲಿಯೇ ಮಿಂದು ಪುನಃ ನೀರಿನಲ್ಲಿಯೇ ಲಯವಾಗಿ ಮರೆಯಾಗುತ್ತವೆ. ಹಾಗೆಯೇ ಜೀವರಾಶಿಗಳೂ ಕೂಡ ಪರವಸ್ತುವೆಂಬ ಅನಂತ ಸಾಗರದಲ್ಲಿ ಕಾಣಿಸಿಕೊಳ್ಳುವ ಬುದ್ಬುದಗಳು. ಎಲ್ಲವನ್ನೂ ಒಳಗೊಂಡು ಎಲ್ಲವನ್ನೂ ಮೀರಿದ ಪರವಸ್ತುವೆ ಭಗವಂತ. ಸಕಲ ವಸ್ತುಗಳಲ್ಲೂ ಕಾಣಿಸುವ ಮೂಲವಸ್ತುವೇ ಅದು. ಅದರಲ್ಲಿಯೇ ಸಕಲ ಜೀವರಾಶಿಗಳೂ ಲಯಿಸಿ ಮರೆಯಾಗುತ್ತವೆ.

ದೇವರು ಪ್ರತ್ಯೇಕವಾಗಿ ನಿಂತಿರುವನು. ಚೇತನ ಅಚೇತನ ದೇವರಿಂದ ಬೇರೆಯಾಗಿ ಜೀವಿಸಲಾರವು. ಬುದ್ಬುದಗಳ ಹಾಗೆ. ಪರವಸ್ತುವಿನಿಂದ ಪ್ರತ್ಯೇಕವಾಗಿ ಅವು ಇರುವುದಕ್ಕೆ ಸಾಧ್ಯವಿಲ್ಲ.

ಪರವಸ್ತು ಕಾವೇರಿಯ ಪ್ರವಾಹದ ಹಾಗೆ. ಕಾವೇರಿ ನದಿಯ ನೀರನ್ನು ಕೈಯಲ್ಲಿ ತೆಗೆದುಕೊಂಡು, "ಇಗೋ ಕಾವೇರಿ!" ಎನ್ನುವ ಹಾಗೆ ನಮ್ಮ ಅಹಂಕಾರದ ಭ್ರಮೆ.

ಚೇತನ ವಸ್ತುಗಳ ವೇದಾಂತ ಪರಿಶೀಲನೆಯೆಲ್ಲಾ, ಉಪ್ಪಿನಿಂದಾದ ಗೊಂಬೆಯು ಸಮುದ್ರದ ಆಳವನ್ನು ಪರಿಶೀಲಿಸುವೆನೆಂದು ಉಪ್ಪುನೀರಿನಲ್ಲಿ ಳಿದು ಮರೆಯಾಗುವ ಹಾಗೆಯೇ ಅಲ್ಲದೆ ಬೇರಲ್ಲ. ನೀರಿನಲ್ಲಿ ಮುಳಿಗಿದ ಗೊಂಬೆಯು ಕರಗಿ ನೀರಿನಲ್ಲಿ ಲಯಿಸುತ್ತದೆ. ಬಳಿಕ ಯಾರ ಪರಿಶೀಲನೆ

ಯನ್ನು ಯಾರು ಮಾಡುವುದು? ಈಶ್ವರನನ್ನು ಅಳೆಯುತ್ತೇನೆಂದು ಹೊರಡುವ ಜೀವ ಈಶ್ವರನಲ್ಲಿ ಮುಳುಗಿ ಲಯಿಸುತ್ತದೆ. ಬಳಿಕ ಈಶ್ವರನ ಸ್ವರೂಪವನ್ನು ಅದು ಹೇಗೆ ಪರಿಶೀಲಿಸುವುದು?

ಮನುಷ್ಯನ ದೇಹ ಒಂದು ಪಾತ್ರೆ. ಪಾತ್ರೆಯೊಳಗೆ ಬೇಯುವ ಅಕ್ಕಿ, ಬೇಳೆ, ನೀರಿನ ಹಾಗೆ ಮನುಷ್ಯನ ಬುದ್ಧಿ ಮತ್ತು ಇಂದ್ರಿಯಗಳು. ಒಲೆಯ ಮೇಲಿನ ಪಾತ್ರೆಯೊಳಗೆ ನೀರು ಕುದಿಯುತ್ತದೆ. ಪಾತ್ರೆಯನ್ನು ಮುಟ್ಟಿದರೆ ಬಿಸಿ; ಬೇಯುವ ಅನ್ನದಲ್ಲಿ ಕೈಯಿಟ್ಟರೆ ಸುಟ್ಟುಹೋಗುತ್ತದೆ. ಪಾತ್ರೆಯಲ್ಲೂ ಅನ್ನದಲ್ಲೂ ಇರುವ ಶಾಖ ನಿಜವಾಗಿ ಪಾತ್ರೆಯದೂ ಅಲ್ಲ, ಅನ್ನದ್ದೂ ಅಲ್ಲ. ಕೆಳಗೆ ಒಲೆಯಲ್ಲಿರುವ ಬೆಂಕಿಯ ಶಾಖವೇ ಅದು. ಹಾಗೆಯೇ ಸರ್ವ ವ್ಯಾಪಕವಾದ ಬ್ರಹ್ಮ ಚೇತನಾಚೇತನ ವಸ್ತುಗಳ ಗುಣ ವಿಶೇಷಗಳಾಗಿ ರೂಪಿಸುತ್ತದೆ. ಬುದ್ಧಿಯೂ ಇಂದ್ರಿಯಗಳೂ. ಮಾಡುವ ಕೆಲಸಗಳೆಲ್ಲಾ ಬ್ರಹ್ಮದ ಪ್ರೇರೇಪಣೆಯಿಂದಲೇ. ಅವರ ಶಕ್ತಿಯಿಲ್ಲದೆ ಅಣುಮಾತ್ರವೂ ಚಲಿಸಲಾಗದು.

ಯಾವ ಅತ್ಯಲ್ಪ ವಸ್ತುವನ್ನಾದರೂ ಸಂಪೂರ್ಣ ಸಂಶೋಧನೆ ಮಾಡಹೋದರೆ ಪರವಸ್ತುವೆಂಬ ಅಸ್ತಿಭಾರವನ್ನೇ ಮುಟ್ಟುತ್ತೇವೆ. ಸೇಲಂ ಜಿಲ್ಲಾದೊಳಗೆ ಎಲ್ಲಿ ಭಾವಿಯನ್ನು ತೋಡಹೋದರೂ ಒಂದು ಆಳದನಂತರ ಕಲ್ಲನ್ನೇ ಮುಟ್ಟುತ್ತೇವೆ. ಹಾಗೆಯೇ ಬ್ರಹ್ಮವೂ; ಎಷ್ಟೇ ಚಿಕ್ಕ ವಸ್ತುವಾದರೂ ಒಂದು ಆಳದನಂತರ ಮುಂದೆ ಹೋಗದ ಹಾಗೆ ಆ ಕಲ್ಲು ತಡೆಗಟ್ಟುತ್ತದೆ.

## ೨೨

## ಬಯಸಿ ಬೇಡಿದರೆ ಬರುವನು!

"ಮಾಯೆಯಿಂದ ಪಾರಾಗುವುದಕ್ಕೆ ದಾರಿ ಯಾವುದು?" ಎಂದೊಬ್ಬ ಶಿಷ್ಯರು ಶ್ರೀರಾಮಕೃಷ್ಣರನ್ನು ಕೇಳಿದರು. ಅದಕ್ಕವರು, ಹೀಗೆಂದರು:

"ಪಾರಾಗಬೇಕೆಂದು ನಿಜವಾಗಿಯೂ ಬಯಸಿದರೆ ಭಗವಂತನೇ ದಾರಿ ತೋರಿಸುವನು. ಬಯಸುವುದೆಂದರೆ ಬರಿಯ ಬಾಯ ಮಾತಿನಿಂದಲ್ಲ. ಬಿಡಿಸಲ್ಪಡಬೇಕೆಂಬ ಆಸೆ ತೀವ್ರವಾಗಿದ್ದು ಹೃದಯ ಕರಗಬೇಕು.

ಹೆಂಡತಿಗಾಗಿ ಮಗುವಿಗಾಗಿ ಹಣಕ್ಕಾಗಿ ಅಶ್ರು ಪ್ರವಾಹವನ್ನೇ ಹರಿಸುತ್ತೇವೆ. ಆದರೆ ಭಗವಂತನನ್ನು ಪಡೆಯಬೇಕೆಂದು ಯಾರು ಹಾಗೆ ಅಳುವರು?

"ಮಗು ಗೊಂಬೆಗಳನ್ನಿಟ್ಟುಕೊಂಡು ಆಟವಾಡುತ್ತಿರುವವರೆಗೂ ತಾಯಿ ಒಳಗೆ ಕೆಲಸಮಾಡುತ್ತಿರುವಳು. ಆಟ ಸಾಕೆನಿಸಿ ಮಗು ಸಾಮಾನುಗಳನ್ನು ದೂರ ಎಸೆದು ಗೊಳೋ ಎಂದು ಅಳುತ್ತದೆ. ಆ ಕ್ಷಣವೇ ತಾಯಿ ಕೆಲಸವನ್ನೆಲ್ಲಾ ಹಾಗೆಯೇ ಬಿಟ್ಟು ಮಗುವಿನೆಡೆಗೆ ಓಡುತ್ತಾಳೆ,— ಅವಸರದಲ್ಲಿ ಸಾಮಾನುಗಳು ದಿಕ್ಕಾಪಾಲಾಗಿ ಚದರಿ ಬೀಳುತ್ತವೆ! ಹಾಗೆಯೇ ಹೃದಯಾಂತರಾಳದಿಂದ ಹೊರಡುವ ಅಳುವಿನಿಂದ ದೀನ ಭಕ್ತನು ಪ್ರಾರ್ಥಿಸಿ ಮೊರೆಯಿಟ್ಟರೆ ಭಗವತಿ ಓಡಿ ಬರುತ್ತಾಳೆ."

"ಈ ಕಲಿಕಾಲದಲ್ಲಿ ದೊಡ್ಡ ತಪಸ್ಸು ಬೇಕಾಗಿಲ್ಲ. ಮೂರೇ ದಿನಗಳು ನಿಜವಾಗಿ ಭಗವಂತನನ್ನು ಪಡೆಯ ಬಯಸಿ ಧ್ಯಾನಿಸಿದರೆ ಸಾಕು. ಜನರು ಈಶ್ವರಿಯ ಅನುಗ್ರಹವನ್ನು ಪಡೆಯುವರು. ಇದು ಸುಳ್ಳಲ್ಲ. ಮಗು! ನೀನು ನಿಜವಾಗಿಯೂ ಆಕೆಯನ್ನು ನೋಡಲೇಬೇಕೆಂದು ತೀವ್ರವಾಗಿ ಮೂರು ದಿನ ಅತ್ತು ನೋಡು! ಜಯ ಹೊಂದುವಿ. 'ಭಗವತಿ! ನನಗೆ ಶಾಶ್ವತವಾದ ಭಕ್ತಿಯನ್ನು ಅನುಗ್ರಹಿಸು; ಸಂದೇಹವನ್ನು ದೂರ ಮಾಡು. ನಿನ್ನನ್ನು ಯಾವಾಗಲೂ ಮರೆಯದಂತೆ ವರವನ್ನು ದಯಪಾಲಿಸು. ನನ್ನ ಪಾಪವನ್ನೆಲ್ಲಾ ಪರಿಹರಿಸು!' ಎಂದು ಮೂರು ದಿನ ಹೃದಯ ಕರಗಿ ಪ್ರಾರ್ಥಿಸು. ನಿಜವಾಗಿಯೂ ಫಲವನ್ನು ಪಡೆಯುವೆ. ಭಕ್ತಿಯಿಂದ ದೀನನಾಗಿ ಮೊರೆಯಿಟ್ಟರೆ ಪ್ರಯೋಜನವಿಲ್ಲದೆ ಹೋಗುವುದಿಲ್ಲ. ಸಂದೇಹವೇಕೆ? ನನ್ನನ್ನು ನೋಡು, ನೋಡಿ ಧೈರ್ಯ ತಾಳು!" ಎಂದರು.

* * * *

"ಅಮ್ಮಾ! ನನಗೆ ಹಸಿವಾದೊಡನೆ ಎಚ್ಚರಗೊಳಿಸು" ಎನ್ನುತ್ತದೆ ಮಗು.

"ಮಗೂ! ಹಸಿವಾದರೆ ಅದೇ ನಿನ್ನನ್ನು ಎಚ್ಚರಗೊಳಿಸುತ್ತದೆ" ಎನ್ನುತ್ತಾಳೆ ತಾಯಿ.

ಭಗವಂತನನ್ನು ಪಡೆಯಬೇಕೆಂಬ ಹಸಿವುಂಟಾದರೆ ಯಾರೂ ನಮ್ಮನ್ನು ತಟ್ಟಿ ಎಬ್ಬಿಸಬೇಕಾಗಿಲ್ಲ. ಮಾರ್ಗವನ್ನೂ ತೋರಿಸಿ ಕೊಡಬೇಕಾಗಿಲ್ಲ.

ಬಯಲು ನಾಟಕ ಆಡುವವರು ಈ ವಿಷಯವನ್ನು ಸ್ಪಷ್ಟಪಡಿಸುತ್ತಾರೆ. ಮೊಟ್ಟಮೊದಲು ಮದ್ದಳೆಯನ್ನು ಬಾರಿಸಿ ದೊಡ್ಡ ಕೂಗನ್ನೆಬ್ಬಿಸಿ

"ಕೃಷ್ಣಾ, ಕೃಷ್ಣಾ!" ಎಂದು ಗಟ್ಟಿಯಾಗಿ ಶಬ್ದಮಾಡುತ್ತಾ ಕೆಲವರು ಹಾಡುವರು. ಆದರೆ ಕೃಷ್ಣ ವೇಷಧಾರಿಯು ತೆರೆಗೆ ಹಿಂದುಗಡೆ ಹರಟೆ ಹೊಡೆಯುತ್ತಾ, ಇಲ್ಲ ತಿಂಡಿ ತಿನ್ನುತ್ತಾ ಕೂಗನ್ನು ಕಿವಿಗೆ ಹಾಕಿಕೊಳ್ಳದೆ ಇರುವನು. ಬಳಿಕ ಗಲಾಟೆಯೆಲ್ಲಾ ಅಡಗಿ ನಾರದರು ವೀಣೆಯನ್ನು ಮೀಟುತ್ತಾ ಮಧುರ ಧ್ವನಿಯಲ್ಲಿ ಹಾಡುತ್ತಾ, "ಕೃಷ್ಣಾ, ಬಾ!" ಎನ್ನುತ್ತಾರೆ. ತಕ್ಷಣವೇ ಕೃಷ್ಣನು ಅವಸರವಾಗಿ ಎದ್ದು ರಂಗಭೂಮಿಯಲ್ಲಿ ಹಾಜರಾಗುತ್ತಾನೆ.

ವೇಷಗಳಿಂದಲೂ ಬರಿಯ ಕೂಗಿನಿಂದಲೂ ಪ್ರಯೋಜನವಿಲ್ಲ. ನಿಜವಾದ ಭಕ್ತರ ಮೇಲೆ ಮಾತ್ರವೇ ಭಗವಂತನಿಗೆ ಅಪಾರ ಪ್ರೀತಿ. ಇದನ್ನು ಪಾಮರರೂ ಅರಿಯುವಂತೆ ಈ ಗ್ರಾಮನಾಟಕ ವಿಧಾನ ತೋರಿಸುತ್ತದೆ.

"ಭಗವಂತಾ! ದೇವರೇ!" ಎಂದೆಲ್ಲಾ ಬರಿಯ ಬಾಯಿ ಮಾತಿನಲ್ಲಿ ಮಾಡುವ ಪ್ರಾರ್ಥನೆ ದೇವರಿಗೆ ಸಲ್ಲುವುದಿಲ್ಲ. ಹೃದಯವು ಕರಗಿ ನೀರಾದರೆ ಮಾತೆಲ್ಲಾ ನಿಂತುಹೋಗುತ್ತದೆ. ಭಕ್ತ ದೈನ್ಯದಿಂದ ಅಳುವಾಗ ಈಶ್ವರಿ ಸುಮ್ಮನಿರಲಾರಳು, ಓಡೋಡಿ ಬಂದು ಭಕ್ತನನ್ನು ಅನುಗ್ರಹಿಸುವಳು.

## ೨೩

## ಪೊನ್ನಾಚಾರಿಯ ಹೆಂಡತಿ

ಶ್ರೀರಾಮಕೃಷ್ಣರೆಡೆ ಇದ್ದು ಬಂದ ಶಿಷ್ಯನೊಬ್ಬನಿಗೆ ಸರಕಾರದಲ್ಲಿ ಉದ್ಯೋಗ್ಯವಾಯಿತು. ಕೆಲಸಮಾಡಿ ಸಂಬಳವನ್ನು ಪಡೆಯುವುದು ಸರಿಯೇ, ಎಂಬ ಪ್ರಶ್ನೆಯೆದ್ದಿತು. ಶ್ರೀರಾಮಕೃಷ್ಣರು ಹೇಳಿದರು:

"ಅಪ್ಪಾ, ನಿಮ್ಮ ತಾಯಿಯನ್ನು ಕಾಪಾಡುವ ಸಲುವಾಗಿ ನೀನು ಉದ್ಯೋಗ ಮಾಡಲು ಒಪ್ಪಿದೆ. ನೀನು ಮಾಡಿದುದು ಸರಿಯೇ. ಈ ಆವಶ್ಯಕತೆಯಿಲ್ಲದಿದ್ದರೆ ಅದು ತಪ್ಪು. ಚಾಕರಿಯನ್ನು ಒಪ್ಪಿಕೊಂಡು ಭಗವಂತನ ಕೆಲಸವನ್ನು ಮಾಡು."

ಹಣ ಅಧಿಕಾರಗಳನ್ನು ಸಂಪಾದಿಸಿದವರು ಅವುಗಳನ್ನು ಕುರಿತು ಅಹಂಕಾರ ಪಡುತ್ತಾರೆ. ಸಮಾಜದಲ್ಲಿ ಎಲ್ಲರೂ ಅವರನ್ನು ಗೌರವಿಸಿ ಹೊಗಳುತ್ತಾರೆ. ಆದರೆ ಇದೆಲ್ಲಾ ಎಷ್ಟು ದಿನ? ಪ್ರಪಂಚವನ್ನು ಬಿಟ್ಟು

ಹೋಗುವಾಗ ಇದರಲ್ಲಿ ಯಾವುದೂ ನಮ್ಮೊಂದಿಗೆ ಬರುವುದಿಲ್ಲ. ಹಣ ವನ್ನು ಕುರಿತು ಒಬ್ಬನು ಹೆಮ್ಮೆ ಪಡುವದಕ್ಕೆ ಏನಿದೆ? ನಾನು ಹಣವಂತ ನೆಂದು ಒಬ್ಬನು ಭಾವಿಸಿಕೊಂಡಾಗ, ನನಗಿಂತಲೂ ಹೆಚ್ಚು ಐಶ್ವರ್ಯ ವಂತರು ಎಷ್ಟೋಮಂದಿ ಇರುವವರು ಎಂಬ ವಿಷಯವನ್ನು ಅವನು ಮರೆತು ಬಿಡುತ್ತಾನೆ. ಅವರ ಮುಂದೆ ಇವನು ಭಿಕ್ಷುಕನೇ ಸರಿ.

ಕತ್ತಲಾದೊಡನೆ ಮಿಂಚಿನ ಹುಳುಗಳು ಹೊರಬರುತ್ತವೆ. ಆ ಹುಳು ಗಳು ಎಣಿಸಬಹುದು: "ಆಹಾ! ನಾವು ಇಡೀ ಜಗತ್ತನ್ನೆಲ್ಲಾ ನಮ್ಮ ಜ್ಯೋತಿಯಿಂದ ಬೆಳಗುತ್ತೇವೆ. ನಮಗೆ ಸಮಾನರು ಯಾರು?" ಎಂದು. ಬಳಿಕ ಸ್ವಲ್ಪ ಹೊತ್ತಾಗುತ್ತಲೇ ಆಕಾಶದಲ್ಲಿ ನಕ್ಷತ್ರಗಳು ಎದ್ದು ಪ್ರಕಾಶಿ ಸುತ್ತವೆ. ಅದನ್ನು ಕಂಡೊಡನೆ ಮಿಂಚಿನ ಹುಳುಗಳ ಅಹಂಕಾರ ಅಡಗುತ್ತದೆ.

"ಓಹೋ! ಅಗೋ ಆಕಾಶದಲ್ಲಿ ಜ್ವಲಿಸುವ ತಾರೆಗಳು ನಮಗಿಂತಲೂ ಪ್ರಕಾಶಮಾನವಾಗಿವೆಯೆಲ್ಲಾ! ನಮ್ಮ ಗರ್ವವನ್ನು ಬಿಟ್ಟು ನಮ್ರತೆಯಿಂದಿರ ಬೇಕು" ಎಂದು ಯೋಚನೆ ಮಾಡಿ ಸುಮ್ಮನಾಗುತ್ತವೆ. ಬಳಿಕ ಪೂರ್ಣ ಚಂದ್ರನು ಉದಯಿಸುತ್ತಾನೆ. "ಆಹಾ!" ಎಂದು ನಕ್ಷತ್ರಗಳೆಲ್ಲಾ ಕಳೆಗುಂದಿ ಬಾಡುತ್ತವೆ. ಚಂದ್ರನೋ ಕಾಂತಿಯಿಂದ ಅತಿ ಗರ್ವದಿಂದ ಸುತ್ತಲೂ ವೀಕ್ಷಿಸುತ್ತಾನೆ: "ನನಗೆ ಸಮಾನರು ಈ ವಿಶ್ವದಲ್ಲಿ ಯಾರುಂಟು? ಇಡೀ ಜಗತ್ತಿನ ಮೇಲೆ ನನ್ನ ಬೆಳದಿಂಗಳನ್ನು ಚೆಲ್ಲಿ ಪ್ರಕಾಶ ಗೊಳಿಸುತ್ತೇನೆ!" ಎಂದು ಹೆಮ್ಮೆ ಪಡುತ್ತಾನೆ.

ಇದ್ದಕ್ಕಿದ್ದ ಹಾಗೆ ಪೂರ್ವ ದಿಗಂತ ಬಿಳುಪೇರುವುದು. ಸೂರ್ಯ ಉದಿಸುತ್ತಾನೆ. ಚಂದ್ರನೀಗ ಎಲ್ಲಿ? "ಧನವಂತರೆ! ಇದನ್ನೆಲ್ಲಾ ನೋಡಿ ನಮ್ರತೆಯಿಂದಿರಿ, ಅಹಂಕಾರವನ್ನು ತ್ಯಜಿಸಿ!" ಎನ್ನುತ್ತಾರೆ ಶ್ರೀರಾಮ ಕೃಷ್ಣರು.

* * * *

ಸೇತುವೆಯ ಕೆಳಗೆ ನೀರು ಹರಿಯುತ್ತದೆ: ಹರಿಯದೆ ನಿಂತು ದುರ್ಗಂಧವನ್ನುಂಟುಮಾಡುವುದಿಲ್ಲ. ಹಾಗೆಯೇ ಹಣವನ್ನು ಕುರಿತು ವರ್ತಿಸಿರಿ. ಹಣ ಒಂದೇ ಕಡೆ ನಿಂತು ಅಶುದ್ಧಿಯಾಗಿ ದುರ್ವಾಸನೆ ಯನ್ನುಂಟುಮಾಡುವ ಹಾಗೆ ಬಿಡಬೇಡಿ. ಧಾರಾಳವಾಗಿ ಹಣವನ್ನು

ವೆಚ್ಚಮಾಡಿ ಒಳ್ಳೆಯದನ್ನು ಮಾಡಿ. ಹಣವನ್ನು ನಿಮ್ಮ ಸೇವಕನನ್ನಾಗಿ ಇಟ್ಟುಕೊಳ್ಳಬೇಕೇ ಅಲ್ಲದೆ ನೀವು ಅದರ ಆಳಿನಂತೆ ವರ್ತಿಸಬೇಡಿ.

"ಪೂನ್ನಾಚಾರಿಯ ಹೆಂಡತಿಯನ್ನು ನೋಡಿ! ಒಂದು ಕೈಯಿಂದ ಭತ್ತವನ್ನು ಒರಳಿಗೆ ಸರಿಯಾಗಿ ತಳ್ಳುತ್ತಲೇ ಇರುವಳು. ಮತ್ತೊಂದು ಕೈಯಿಂದ ತೊಡೆಯಮೇಲಿರುವ ಮಗುವನ್ನು ತಟ್ಟಿ ಮಲಗಿಸುತ್ತಾಳೆ. ಅವಲಕ್ಕಿಯನ್ನು ಕೊಳ್ಳಲು ಬಂದವರೊಡನೆ ಚೌಕಾಸಿಯನ್ನೂ ಮಾಡು ತ್ತಿರುತ್ತಾಳೆ! ಹೀಗೆ ಹಲವಾರು ವಿಷಯಗಳನ್ನು ಗಮನಿಸುತ್ತಿದ್ದರೂ ಒರಳಿ ನಲ್ಲಿ ತನ್ನ ಕೈ ಬೆರಳುಗಳು ಸಿಕ್ಕಿಕೊಳ್ಳದಂತೆ ಅತಿ ಜಾಗ್ರತೆಯಿಂದ ನೋಡಿ ಕೊಳ್ಳುತ್ತಾಳೆ. ಹಾಗೆಯೆ ಸಂಸಾರದಲ್ಲಿದ್ದರೂ ದಾರಿ ತಪ್ಪದೆ ಭಗವಂತನ ಸ್ಮರಣೆಯನ್ನು ಮನಸ್ಸಿನಲ್ಲಾವಾಗಲೂ ಸ್ಥಿರವಾಗಿಟ್ಟುಕೊಂಡು ಎಲ್ಲಾ ಕೆಲಸಗಳನ್ನೂ ಮಾಡಿ."

"ಕಂಬವನ್ನು ಹಿಡಿದುಕೊಂಡು ಹುಡುಗನು ಗಿರ್ರೆಂದು ವೇಗವಾಗಿ ಸುತ್ತುತ್ತಾನೆ. ಎಷ್ಟೇ ವೇಗವಾಗಿ ಅವನು ಸುತ್ತುವಾಗಲೂ ಕಂಬವನ್ನು ಮಾತ್ರ ಭದ್ರವಾಗಿ ಹಿಡಿದುಕೊಂಡಿರುತ್ತಾನೆ. ಹಾಗೆಯೇ ಭಗವಂತನನ್ನು ಭದ್ರವಾಗಿ ಹಿಡಿದುಕೊಂಡು ಸಂಸಾರ ಜೀವನದಲ್ಲಿ ಸುತ್ತಿ ಬನ್ನಿ."

"ಗ್ರಾಮದಲ್ಲಿ ಹೆಣ್ಣು ಮಕ್ಕಳು ತಲೆಯ ಮೇಲೆ ತಣ್ಣೀರು ಬಿಂದಿಗೆ ಯನ್ನು ಹೊತ್ತುಕೊಂಡು ಹೋಗುವುದನ್ನು ನೋಡಿ. ದೊಡ್ಡ ಕೊಡದ ಮೇಲೆ ಚಿಕ್ಕದೊಂದು ಕೊಡ, ಅದರ ಮೇಲೆ ಅದಕ್ಕಿಂತಲೂ ಚಿಕ್ಕದಾದ ಪಾತ್ರೆಯೊಂದು. ಎಲ್ಲದರಲ್ಲೂ ನೀರು ತುಂಬಿದ್ದರೂ ಒಂದು ತೊಟ್ಟು ನೀರೂ ಕೆಳಗೆ ಚೆಲ್ಲದಂತೆ ನಡೆದು ಹೋಗುತ್ತಾರೆ. ದಾರಿಯಲ್ಲಿ ಕುಟುಂಬ ಯೋಗಕ್ಷೇಮಗಳನ್ನು ಕುರಿತು ಹರಟುತ್ತಲೂ ಹೋಗುತ್ತಾರೆ. ಹೀಗೆಯೇ ನೀವೆಲ್ಲಾ ಸಂಸಾರವನ್ನು ನಡೆಸಬೇಕು. ಯಾವ ಸಂದರ್ಭದಲ್ಲೂ ದಾರಿ ತಪ್ಪಿ ನಡೆಯಬಾರದು."

ಎಲ್ಲವನ್ನೂ ದೇವರಿಗಾಗಿ ಮಾಡುತ್ತೇನೆ, ಎಂದು ಮನಸ್ಸನ್ನು ಸ್ಥಿರ ಗೊಳಿಸಿ, ಎಲ್ಲಾ ಕೆಲಸಗಳನ್ನೂ ಮಾಡುತ್ತಿದ್ದರೆ ದಾರಿ ತಪ್ಪದು. ಇದೇ ಕರ್ಮಯೋಗ, ಇದೇ ಭಕ್ತಿಯೋಗ ಕೂಡ.

"ಹಲಸಿನ ಹಣ್ಣನ್ನು ಕುಯ್ಯುವಾಗ ಕೈಗೆ ಎಣ್ಣೆಯನ್ನು ಸವರಿ ಕೊಂಡು ಬಳಿಕ ಕೆಲಸಮಾಡುತ್ತೇವೆ. ಹಾಗೆ ಮಾಡಿದರೆ ಅದರ ಹಾಲು ಕೈಗೆ ಅಂಟಿಕೊಳ್ಳುವುದಿಲ್ಲ. ಹಣ್ಣನ್ನು ಕುಯಿದು ಸುಲಭವಾಗಿ ತೊಳೆ

ಗಳನ್ನು ತೆಗೆಯಬಹುದು. ಹಾಗೆಯೇ ಮನಸ್ಸನ್ನು ದೇವರ ಧ್ಯಾನದಿಂದ ಶುದ್ಧವಾಗಿಟ್ಟುಕೊಂಡೇ ಪ್ರಪಂಚದಲ್ಲಿ ಬಾಳಬೇಕು. ಹಾಗೆ ಮಾಡಿದರೆ ಎಷ್ಟೇ ಐಶ್ವರ್ಯ ಸುಖ ನಮ್ಮನ್ನಾವರಿಸಿದರೂ ಅದರ ಕೊಳೆ ಮನಸ್ಸಿಗಂಟು ವುದಿಲ್ಲ. ಎಷ್ಟೇ ಕಷ್ಟಗಳೊದಗಿದರೂ ಮನಸ್ಸು ನಿರಾಶೆಯಿಂದೊಡೆಯುವು ದಿಲ್ಲ."

## ೨೪

## "ದನಗಳು ಮೆಲುಕು ಹಾಕುವ ಹಾಗೆ"

"ಹಸು ಹಾಲುಕೊಡುತ್ತದೆ. ಈ ಹಾಲು ಹಸುವಿನ ದೇಹದಲ್ಲಿ ಸಂಚರಿಸುವ ರಕ್ತದಲ್ಲಿ ಬೆರೆತು, ಅದರ ದೇಹದಾದ್ಯಂತವೂ ವ್ಯಾಪಿಸಿರು ತ್ತದೆ. ಆದರೂ ಹಸುವಿನ ಕಿವಿಯನ್ನು ಹಿಂಡಿದರೆ ಹಾಲು ಬರುತ್ತದೆಯೆ? ಇಲ್ಲ. ಅದರ ಕೆಚ್ಚಲಿನಲ್ಲಿ ಮಾತ್ರ ಹಾಲು ಚಿಮ್ಮುತ್ತದೆ. ಜಗತ್ತೆಲ್ಲಾ ದೇವಮಯವೆಂಬುದು ನಿಜವೇ ಹೌದು. ಆದರೂ ಹಸುವಿನ ಕೆಚ್ಚಲಲ್ಲಿ ಮಾತ್ರ ಹಾಲು ಚಿಮ್ಮುವ ಹಾಗೆ ಪುಣ್ಯಕ್ಷೇತ್ರಗಳಲ್ಲಿ ಮಾತ್ರ ಭಕ್ತಿ ಹೊರ ಚಿಮ್ಮಿ ಆ ಕ್ಷೇತ್ರಗಳಿಗೆ ಒಂದು ಪ್ರತ್ಯೇಕ ಮಹಿಮೆಯನ್ನು ಉಂಟುಮಾಡು ತ್ತದೆ. ಭಕ್ತರು ಆ ಸ್ಥಳಗಳಿಗೆ ಯಾತ್ರೆ ಹೋಗಿ ಅಲ್ಲಿ ಪ್ರವಹಿಸುವ ಭಕ್ತಿ ಯನ್ನು ಕುಡಿದು ಭಗವಂತನನ್ನು ಪಡೆಯುತ್ತಾರೆ. ಎಷ್ಟೋ ತಲಾಂತರ ಗಳಿಂದಲೂ ಭಕ್ತರನೇಕರು ತಪಧ್ಯಾನಗಳನ್ನು ಆಚರಿಸಿ ಪವಿತ್ರಮಾಡಿದ ಆ ಸ್ಥಳಗಳಲ್ಲಿ ದೇವರು ಸುಲಭವಾಗಿ ತನ್ನ ದರ್ಶನವನ್ನು ಅನುಗ್ರಹಿಸು ತ್ತಾನೆ. ಎಣಿಕೆಯಿಲ್ಲದ ಭಕ್ತರು ಮಾಡಿದ ಜಪತಪಾದಿಗಳ ಪ್ರಭಾವ ಆ ಕ್ಷೇತ್ರಗಳಲ್ಲಿ ನೆಲೆಸಿರುತ್ತದೆ. ಇದು ಭಕ್ತ ಯಾತ್ರಿಕರ ಹೃದಯಗಳನ್ನು ತನ್ಮಯಗೊಳಿಸುತ್ತದೆ. ಭಕ್ತರ ಪಾದ ಧೂಳಿ ಸೋಂಕಿದ ಸ್ಥಳವೆಲ್ಲಾ ಪವಿತ್ರವೆನ್ನುತ್ತಾರೆ,—ಕೋಟ್ಯಂತರ ಭಕ್ತರು—ವಿದ್ಯಾವಂತರೂ, ವಿದ್ಯೆಯ ವಾಸನೆಯೇ ಇಲ್ಲದ ಪಾಮರರೂ ಕೂಡ—ಕೆಳಗೆ ಬಿದ್ದು ಹೊರಳಾಡಿ ದೈನ್ಯದಿಂದ ಪ್ರಾರ್ಥಿಸಿ ಧ್ಯಾನಮಾಡಿದ ಸ್ಥಳಗಳಿಗೆ ಪ್ರತ್ಯೇಕವಾದ ಶಕ್ತಿ ಯೊಂದುಂಟು. ಸಂಸಾರವನ್ನೂ ಆಸೆಗಳನ್ನೂ ತ್ಯಜಿಸಿ ಹೃದಯ ಕರಗಿ, ಭಕ್ತರು ಪರವಶರಾಗಿ ಹಾಡಿ ಆನಂದದಿಂದ ನೃತ್ಯಮಾಡಿ ಪವಿತ್ರಮಾಡಿದ ಪುಣ್ಯ ಕ್ಷೇತ್ರಗಳಿಗೆ ನಾವೂ ಹೋಗಿ ನಮ್ಮ ಹೃದಯಗಳನ್ನು ಭಗವಂತನಿ

ಗರ್ಜಿಸಿದರೆ ನಮ್ಮ ಕಠಿಣ ಹೃದಯಗಳೂ ಕರಗುತ್ತವೆ. ಆದ್ದರಿಂದ ಆ ಸ್ಥಳದಲ್ಲಿ ಸರ್ವಾಂತರ್ಯಾಮಿಯಾದ ಈಶ್ವರನನ್ನು ಸುಲಭವಾಗಿ ಕಾಣಬಹುದು.

ಭೂಮಿಯನ್ನು ಎಲ್ಲಿ ಬೇಕಾದರೂ ತೋಡಿ ನೀರು ತೆಗೆಯಬಹುದು. ಆದರೆ ಕೆಲವೆಡೆ ಕೆರೆ, ಭಾವಿ, ಕೊಳ ಸಿದ್ಧವಾಗಿರುತ್ತವೆ. ಅವುಗಳಿಂದ ನಾವು ಸುಲಭವಾಗಿ ದಾಹಶಾಂತಿಯನ್ನು ಮಾಡಿಕೊಳ್ಳಬಹುದು ಅಲ್ಲವೆ? ಹಾಗೆಯೇ ದೇವಾಲಯಗಳೂ ಕ್ಷೇತ್ರ ತೀರ್ಥಗಳೂ. ಭಕ್ತಿ ದಾಹವನ್ನು ಈ ಸ್ಥಳಗಳಲ್ಲಿ ಸುಲಭವಾಗಿ ತೃಪ್ತಿಗೊಳಿಸಬಹುದು.

* * * *

ಕ್ಷೇತ್ರ ಸ್ಥಳಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳಬೇಕು. ದನಗಳು ಹೊಟ್ಟೆತುಂಬ ಮೇವನ್ನುಂಡು ಒಂದೆಡೆ ಮಲಗಿ ಮೆಲಕು ಹಾಕುವ ಹಾಗೆ, ಪುಣ್ಯಕ್ಷೇತ್ರಗಳಿಗೆ ಹೋಗಿ ಪೂಜೆ ಮುಂತಾದುವನ್ನು ಮಾಡಿದ ಬಳಿಕ ಸ್ಥಳ ಪ್ರಭಾವದ ಫಲವಾಗಿ ನಮ್ಮ ಮನಸ್ಸಿನಲ್ಲುಂಟಾದ ಪವಿತ್ರ ಭಾವನೆಗಳನ್ನು ಮೆಲಕು ಹಾಕಬೇಕು.

ಯಾತ್ರೆ ಮುಗಿದೊಡನೆಯೇ ನಮ್ಮ ಕರ್ತವ್ಯ ಮುಗಿಯಿತೆಂದೆಣಿಸಿ ಭಕ್ತಿಯನ್ನೂ ಪವಿತ್ರ ಭಾವನೆಗಳನ್ನೂ ಅಲ್ಲಲ್ಲಿಯೇ ಬಿಟ್ಟು ಬಿಡದೆ, ಏಕಾಂತ ಸ್ಥಳವೊಂದನ್ನು ಹುಡುಕಿ ಅಲ್ಲಿ ಕುಳಿತು ಧ್ಯಾನದಲ್ಲಿ ಮನಸ್ಸನ್ನು ಏಕಾಗ್ರಗೊಳಿಸಿ ನಾವು ಪಡೆದ ಭಕ್ತಿಯನ್ನು ಊರ್ಜಿತ ಪಡಿಸಿಕೊಳ್ಳಬೇಕು. ಹಾಗೆ ಮಾಡದಿದ್ದರೆ ನಾವು ಪಡೆದ ಪವಿತ್ರಾನುಭವಗಳನ್ನು ಬಹಳ ಬೇಗನೆ ಕಳೆದುಕೊಳ್ಳುತ್ತೇವೆ.

* * * *

ಪುಣ್ಯಸ್ಥಳಗಳಿಗೆ ಹೋಗುವುದರಿಂದ ಮಾತ್ರವಾಗಲಿ ಅಥವಾ ಅಲ್ಲಿಯೇ ವಾಸಮಾಡುವುದರಿಂದಾಗಲಿ ಪ್ರಯೋಜನವುಂಟಾಗುವುದಿಲ್ಲ. ಮನಸ್ಸಿನ ಭಾವನೆಯೇ ಮುಖ್ಯ. ಮನಸ್ಸಿನಲ್ಲಿ ಭಕ್ತಿಯಿದ್ದರೆ ಮಾತ್ರ ಸ್ಥಳವಿಶೇಷದ ಫಲವನ್ನು ಪಡೆಯುತ್ತೇವೆ. ನಮ್ಮಲ್ಲಿ ಭಕ್ತಿಯಿದ್ದರೆ ಅದನ್ನು ಕ್ಷೇತ್ರ ಸ್ಥಳಗಳಲ್ಲಿ ವೃದ್ಧಿಮಾಡಿಕೊಳ್ಳಬಹುದು. ಆ ಭಕ್ತಿ ಬೀಜ ನಮ್ಮಲ್ಲಿಲ್ಲದಿದ್ದರೆ ಯಾವ ಕ್ಷೇತ್ರಕ್ಕೆ ಹೋದರೂ ಏನೂ ಪ್ರಯೋಜನವಾಗುವುದಿಲ್ಲ.

ಮನೆಯಲ್ಲಿ ಜಗಳವಾಡಿಕೊಂಡು ಹುಡುಗನು ಕಾಶಿಗೋ ಬೇರೆ ಪುಣ್ಯ

ಸ್ಥಳಕ್ಕೋ ಓಡಿಹೋಗಬಹುದು. ಅಲ್ಲಿ ಕೆಲಸಕ್ಕೆ ಸೇರಿಕೊಂಡು ಹಣ ಸಂಪಾದನೆಯನ್ನು ಮಾಡಬಹುದು. ಬಳಿಕ ತಂದೆ ತಾಯಿಗಳಿಗೂ ಸ್ವಲ್ಪ ಹಣವನ್ನು ಕಳಿಸಬಹುದು. ಆದರೆ ಈ ಸಂಪಾದನೆ ಬೇರೆ, ಭಕ್ತಿ ಸಂಪಾದನೆ ಬೇರೆ.

ಒಂದು ಸಲ ಶ್ರೀರಾಮಕೃಷ್ಣರು ತಮಾಷೆಯಾಗಿ ಹೇಳುತ್ತಾರೆ:

"ನಾನೂ ಮಥುರನಾಥರೂ ಪಶ್ಚಿಮ ಪುಣ್ಯ ಕ್ಷೇತ್ರವೊಂದಕ್ಕೆ ಹೋದೆವು. ಅಲ್ಲಿ ಮಾವಿನ ಮರಗಳೂ ಬಿದಿರು ಪೊದೆಗಳೂ ನಮ್ಮೂರಿನಲ್ಲಿರುವ ಹಾಗೆಯೇ ಇದ್ದುವು. ವ್ಯತ್ಯಾಸವೇನೂ ಕಂಡುಬರಲಿಲ್ಲ. ಆದರೆ ಒಂದು ವಿಶೇಷ: ಈ ಪುಣ್ಯಸ್ಥಳಗಳಲ್ಲಿ ವಾಸವಾಗಿರುವ ಜನರಿಗೆ ಒಳ್ಳೆಯ ಜೀರ್ಣಶಕ್ತಿ! ಎಷ್ಟು ತಿಂದರೂ ಜೀರ್ಣಿಸಿಕೊಳ್ಳುತ್ತಾರೆ!"

ಭಕ್ತಿಯಿಲ್ಲದೆ ಪುಣ್ಯಸ್ಥಳಗಳಲ್ಲಿ ವಾಸಮಾಡುವುದರಲ್ಲಿ ಏನೂ ವಿಶೇಷವಿಲ್ಲವೆಂಬುದನ್ನು ತೋರಿಸುವುದಕ್ಕೇ ಹೀಗೆ ಹೇಳುತ್ತಾರೆ.

೨೫

## ಮುಕ್ತಿಮಾರ್ಗ

"ಜನಕ ಮಹಾರಾಜರು ಇರಲಿಲ್ಲವೆ? ಅವರ ಹಾಗೆಯೇ ನಾನು ಸಂಸಾರದಲ್ಲಿದ್ದುಕೊಂಡೇ ಜ್ಞಾನಿಯಾಗಬಹುದಲ್ಲಾ!" ಎಂದು ಕೆಲವರು ಹೇಳುವುದುಂಟು. ಹಾಗೆ ಹೇಳುವವರು ಇಹಲೋಕದಲ್ಲಿ ಜನಕ ಮಹಾರಾಜರು ಒಬ್ಬರೇ, ಎಂಬುದನ್ನು ಮರೆತು ಬಿಡುತ್ತಾರೆ. ಜನಕ ಮಹಾರಾಜರ ಬಳಿಕ ಅವರ ಹಾಗೆ ಎಷ್ಟು ಮಂದಿ ಈ ಪ್ರಪಂಚದಲ್ಲಿ ಹುಟ್ಟಿದರು?"

"ಸಂಸಾರದಲ್ಲಿದ್ದುಕೊಂಡೇ ಮೋಹವನ್ನು ಬಿಟ್ಟು ಕರ್ತವ್ಯಗಳನ್ನು ನೆರವೇರಿಸುವ ಜ್ಞಾನಿಯಾಗಿ ಬಾಳಬೇಕಾದರೆ, ಕೆಲವುಕಾಲ ಏಕಾಂತವಾಗಿ ಧ್ಯಾನದಲ್ಲಿರಬೇಕು. ಒಂದು ವರುಷ, ಅಥವಾ ಆರು ತಿಂಗಳು, ತಪ್ಪಿದರೆ ಒಂದು ತಿಂಗಳು, ಕಡೆಯಪಕ್ಷ ಹನ್ನೆರಡು ದಿವಸಗಳನ್ನಾದರೂ ಇದಕ್ಕೆ ಮೀಸಲಾಗಿಡಬೇಕು. ಈ ಕಾಲದಲ್ಲಿ ಎಡೆಬಿಡದೆ ಭಗವಂತನನ್ನು ನೆನೆಸುತ್ತಾ ಅವನ ಕೃಪೆಯನ್ನು ಬೇಡಿ ಆಂತರ್ಯ ಭಕ್ತಿಯಿಂದ ಪ್ರಾರ್ಥಿಸಬೇಕು. ಈ ಜಗತ್ತಿನಲ್ಲಿ ನಿನ್ನದು ಎಂದೆಣಿಸಬಹುದಾದ ವಸ್ತುವಾವುದು? ಯಾವುದೂ ನಿನ್ನದಲ್ಲ. ಇದನ್ನು ಮನಸ್ಸಿನಲ್ಲಿ ಧೃಢ ನಿಶ್ಚಯದಿಂದ

ಊರ್ಜಿತ ಪಡಿಸಿಕೊಳ್ಳಬೇಕು. ನಿನ್ನದು ಎಂದಿರುವ ವಸ್ತುಗಳೆಲ್ಲಾ ಒಂದು ದಿವಸವಲ್ಲ ಮತ್ತೊಂದು ದಿವಸ ನಾಶವಾಗಿ ಮರೆಯಾಗುತ್ತವೆ, ಎಂಬ ವಿಷಯವನ್ನು ಚೆನ್ನಾಗಿ ಅರಿತುಕೊಳ್ಳಬೇಕು. ನಮಗಿರುವ ಶಾಶ್ವತವಾದ ವಸ್ತುವೊಂದೇ. ಆದು ದೇವರು. ಸಕಲ ವಸ್ತುಗಳಿಗೂ ಅವನೊಬ್ಬನೇ ಆಧಾರ; ಅವನೇ ಸಮಸ್ತ ಪ್ರಪಂಚವೂ. ಹೇಗೆ ಧ್ಯಾನಮಾಡಿ ಭಗವಂತನನ್ನು ಪಡೆಯಬಲ್ಲೆನೆಂಬ ವಿಷಯವನ್ನು ಎಡೆಬಿಡದೆ ಚಿಂತಿಸುತ್ತಾ ಮನಸ್ಸನ್ನು ನಿರ್ಮಲಗೊಳಿಸಬೇಕು. ಅವನನ್ನು ಪಡೆಯುವ ಆಸೆಯೊಂದನ್ನು ಮಾತ್ರ ಮನಸ್ಸಿನಲ್ಲಿಟ್ಟು ಧ್ಯಾನಮಾಡಬೇಕು. ಧ್ಯಾನಮಾಡುವ ಕಾಲದಲ್ಲಿ ಧ್ಯಾನ ಭಕ್ತಿಗಳನ್ನು ಅಲ್ಲಗಳೆಯುವವರ ಸಹವಾಸವನ್ನು ಮಾಡಬಾರದು. ಭಕ್ತರನ್ನು ನಿಂದಿಸುವ ಅಥವಾ ಪರಿಹಾಸ್ಯ ಮಾಡುವ ಜನರ ಸಹವಾಸವನ್ನು ಸಂಪೂರ್ಣವಾಗಿ ತ್ಯಜಿಸಬೇಕು.''

''ಮನಸ್ಸು ವಶದಲ್ಲಿಲ್ಲದೆ ದಾರಿ ತಪ್ಪುವ ಸಂದರ್ಭವೊದಗಿದರೆ ಜಗನ್ಮಾತೆಯನ್ನು ಪ್ರಾರ್ಥಿಸು. ಅವಳು ನಿನ್ನನ್ನು ಕಾಪಾಡುವಳು. ನಿನ್ನ ಮನಸ್ಸಿನಾಳದಲ್ಲಿ ಹುದುಗಿರುವ ಪಾಪಗಳಿಂದ ಅವಳು ನಿನ್ನನ್ನು ಪಾರು ಮಾಡುತ್ತಾಳೆ.

''ಪಕ್ಕದಲ್ಲಿ ಈಶ್ವರಿಯು ನಿಂತಿರುವಳು ಎಂಬುದನ್ನು ಆಗಾಗ್ಗೆ ಸ್ಮರಿಸುತ್ತಲೇ ಇರು. ಹಾಗೆ ಮಾಡಿದರೆ ಪಾಪ ಭಾವನೆ ಮತ್ತು ಪಾಪ ಕೆಲಸಗಳಿಂದ ನಾಚಿಕೆಪಟ್ಟು ದೂರ ಸರಿಯುವಿ. ಧ್ಯಾನಮಾಡಿ ಅನುಗ್ರಹಿಸಲ್ಪಟ್ಟವನು ಯಾವ ಪದವಿಯಲ್ಲಿದ್ದರೂ ಯಾವ ಕಷ್ಟ ಅಥವಾ ಸುಖ ಭೋಗಗಳೊದಗಿದರೂ ಸ್ವಲ್ಪವೂ ಚಂಚಲಗೊಳ್ಳದೆ ಸ್ಥಿರಮನಸ್ಕನಾಗಿ ನೇರ ಮಾರ್ಗದಲ್ಲಿ ನಡೆಯುವನು. ತನ್ನ ಕರ್ತವ್ಯಗಳನ್ನು ನಮ್ರತೆಯಿಂದಲೂ ಚಾತುರ್ಯದಿಂದಲೂ ಮಾಡಿ ಮುಗಿಸುತ್ತಾನೆ. ಅವನೆಡೆ ದೈವಭಕ್ತಿಯನ್ನೂ ಜನರಲ್ಲಿ ವಿಶ್ವಾಸವನ್ನೂ ಕೆಲಸಗಳಲ್ಲಿ ಪ್ರಾಮಾಣಿಕತೆಯನ್ನೂ ಕಾಣಬಹುದು. ಲೌಕಿಕ ಚಾತುರ್ಯದಲ್ಲಿ ಇತರರಿಗಿಂತ ಅವನು ಯಾವ ವಿಧದಲ್ಲೂ ಕೀಳಾಗಿರುವುದಿಲ್ಲ. ಎಲ್ಲಾ ಕೆಲಸಗಳನ್ನೂ ಕ್ರಮವಾದ ರೀತಿಯಲ್ಲಿ ಮಾಡುವನು. ವಿದ್ಯಾವಂತರ ಮಧ್ಯೆ ಅವನೂ ವಿದ್ಯಾವಂತ; ವಾದ ಪ್ರತಿವಾದಗಳನ್ನೂ ಇತರ ವಿದ್ವಾಂಸರ ಹಾಗೆ ಅವನೂ ಚೆನ್ನಾಗಿಯೇ ಮಾಡುವನು. ತಂದೆ ತಾಯಿಗಳ ವಿಷಯದಲ್ಲಿ ನಮ್ರತೆಯಿಂದಲೂ ಪ್ರೀತಿ ವಿಶ್ವಾಸಗಳಿಂದಲೂ ಕುಂದುಕೊರತೆಯಿಲ್ಲದಂತೆ ವರ್ತಿಸುವನು. ಸ್ನೇಹಿತರೊಂದಿಗೆ

ಮತ್ತು ಬಂಧು ಒಳಗದವರೊಡನೆ ಪ್ರೀತಿಯಿಂದ ನಡೆದುಕೊಳ್ಳುವನು. ಅವನ ಮಾತಿನಲ್ಲಿ ಮಾಧುರ್ಯ ನೆಲೆಸಿರುತ್ತದೆ. ಪರೋಪಕಾರವನ್ನಾಚರಿಸುತ್ತಾ ಸಕಲರ ಪ್ರೀತಿ ಗೌರವವನ್ನು ಪಡೆದಿರುತ್ತಾನೆ. ಹೆಂಡತಿಗೆ ಪ್ರೇಮವೇ ರೂಪಗೊಂಡ ಗಂಡನಾಗಿ ವರ್ತಿಸುವನು. ಇಂತಹ ಮನುಷ್ಯನು ಮಾತ್ರ ಸಂಸಾರದಲ್ಲಿದ್ದು ಬಾಳಿದರೂ ಜ್ಞಾನವನ್ನು ಪಡೆದವನೆಂದೆಣಿಸಲ್ಪಡುತ್ತಾನೆ."

ಭಗವಾನ್ ಶ್ರೀರಾಮಕೃಷ್ಣರ ಉಪದೇಶಗಳು ಬರಿಯ ಒಣ ಶಾಸ್ತ್ರವಲ್ಲ. ತಮ್ಮ ಅನುಭವದಲ್ಲಿ ಸತ್ಯವಾಗಿ ಕಂಡುಬಂದು, ಇತರರು ಆಚರಿಸುವುದಕ್ಕೆ ಉಚಿತ ಮಾರ್ಗವೆಂದು ಸ್ವಂತ ಪರಿಶೀಲಿಸಿ ತಿಳಿದು ಹೇಳುವ ನೀತಿ ವಾಕ್ಯಗಳು. ದೇವಿಯು ಪಕ್ಕದಲ್ಲಿಯೇ ಇರುವಳು, ಅವಳಿಗೆ ಶರಣಾಗತನಾಗು, ಸಕಲವನ್ನೂ ಪಡೆಯುವಿ, ಪಾಪದಿಂದ ಪಾರುಮಾಡುತ್ತಾಳೆ, ಎಂದೆಲ್ಲಾ ಅವರು ತಮ್ಮ ಸ್ವಂತ ಅನುಭವದಲ್ಲಿ ಕಂಡದ್ದನ್ನು ನಮಗೂ ಹೇಳುತ್ತಾರೆ. ಅದನ್ನು ತಿಳಿದುಕೊಂಡು ನಾವು ನಡೆದುಕೊಂಡರೆ ನಾವೂ ಮುಕ್ತರಾಗುತ್ತೇವೆ, ದೇಶವೂ ಅಭಿವೃದ್ಧಿ ಹೊಂದುತ್ತದೆ.

## ೨೬

## ಹೆತ್ತ ತಾಯಿ

ಆತ್ಮ ಚರಿತ್ರೆಯನ್ನು ಅನೇಕರು ಬರೆಯುತ್ತಾರೆ. ಆದರೆ ಒಳ್ಳೆಯ ವಿಷಯಗಳನ್ನು ಮಾತ್ರ ಆರಿಸಿ ಬರೆದು, ಇತರ ವಿಷಯಗಳನ್ನೆಲ್ಲಾ ಮುಚ್ಚಿಡುತ್ತಾರೆ ಅಥವಾ ಬದಲಾಯಿಸಿ ಸೇರಿಸುತ್ತಾರೆ. ಸತ್ಯಾನುಭವಗಳನ್ನೆಲ್ಲಾ ಮುಚ್ಚುಮರೆಯಿಲ್ಲದೆ ಬರೆಯುವುದಾದರೆ, ಎಂತಹ ಪಾಪಕೃತ್ಯಗಳನ್ನು ಮಾಡಲಿದ್ದೆವು, ಭಗವಂತನು ಹೇಗೋ ನಮ್ಮನ್ನು ಅವುಗಳಿಂದ ತಪ್ಪಿಸಿ ಕಾಪಾಡಿದ ಎಂಬುದನ್ನು ಎಲ್ಲರ ಜೀವನ ಚರಿತ್ರೆಯಲ್ಲೂ ಕಾಣಬಹುದು.

ಭಗವಂತನ ಮಹತ್ಕೃಪೆಯಿಂದ ಪಾಪಮುಕ್ತರಾಗುತ್ತೇವೆ. ಅದಿಲ್ಲದಿದ್ದರೆ ಪ್ರಬಲಕೀರ್ತಿಯನ್ನೂ ಪ್ರಖ್ಯಾತ ಹೆಸರುಗಳನ್ನೂ ಪಡೆದ ದೊಡ್ಡವರನೇಕರು ಅಧೋಗತಿಯನ್ನು ಹೊಂದುವರು.

ದೇವರ ಕೃಪೆಯಿದ್ದರೆ ಮಾತ್ರ ಪಾರಾಗುತ್ತೇವೆ ಎಂಬುದು ಸತ್ಯವಿದ್ದರೂ, ನಾವೂ ಕೂಡ ಸ್ವಪ್ರಯತ್ನವಿಲ್ಲದೆ ಸುಮ್ಮನಿರಬಾರದು. "ಕೃಪೆ

ಯೆಂಬುದು ಸಮುದ್ರದ ಮೇಲೆ ಬೀಸುವ ಗಾಳಿಯ ಹಾಗೆ. ಗಾಳಿ ಬೀಸುತ್ತಲೇ ಇರುವುದು. ಆದರೂ ನಾವಿಕರು ಹಡಗಿನ ಪಟಗಳನ್ನು ಬಿಚ್ಚಿದ ಹೊರತು ಗಾಳಿಯಿಂದ ಹಡಗಿಗೆ ಪ್ರಯೋಜನವಾಗುವುದಿಲ್ಲ, ಹಡಗು ಮುಂದುವರೆಯುವುದಿಲ್ಲ. ನಾವೂ ನಮ್ಮ ಮನಸ್ಸೆಂಬ ಪಟವನ್ನು ಸರಿಯಾಗಿ ಬಿಚ್ಚಿ, ಎಲ್ಲೆಲ್ಲೂ ಬೀಸುವ ಭಗವಂತನ ಕೃಪೆಯನ್ನು ಆಕರ್ಷಿಸಿ ತುಂಬಿಕೊಂಡು ಮುಂದುವರಿಯೋಣ.''

ನಮ್ಮ ಜೀವನಗಳಲ್ಲಿ ನಾವು ಮಾಡಬೇಕಾಗಿ ಒದಗುವ ಕೆಲಸಗಳಲ್ಲಿ ಒಂದು ಮೇಲು, ಮತ್ತೊಂದು ಕೀಳು ಎನ್ನುವ ಹಾಗಿಲ್ಲ. ಕೆಲಸವೆಲ್ಲ ಒಂದೇ, ವ್ಯತ್ಯಾಸವೇನೂ ಇಲ್ಲ.

ಯಾವ ಕೆಲಸವನ್ನಾಗಲಿ ದೇವರನ್ನು ಮನಸ್ಸಿನಲ್ಲಿ ನಿಲ್ಲಿಸಿ ಭಕ್ತಿಯಿಂದ ಮಾಡಬೇಕು. ಹಾಗೆ ಮಾಡಿದರೆ ಆತನ ಕೃಪೆ ನಮ್ಮ ಮನಸ್ಸೆಂಬ ಪಟದಲ್ಲಿ ಸೇರಿ ನಮ್ಮ ಜೀವನದ ದೋಣಿ ಮುಂದೆ ಸಾಗುತ್ತದೆ. ನಾವು ಕೈಗೊಂಡ ಕೆಲಸಕ್ಕೆ ಬೇಕಾದ ಸಾಧನಗಳೂ ವಾತಾವರಣವೂ ಆತನ ಕೃಪೆಯಿಂದ ಉಂಟಾಗುತ್ತವೆ.

"ಎಷ್ಟೋ ವರಷದಿಂದ ಕತ್ತಲು ಕವಿದಿದ್ದ ಒಂದು ಮನೆಯಲ್ಲಿ ದೀಪವನ್ನು ಹೊತ್ತಿಸಿದೊಡನೆ ಕತ್ತಲೆ ಮಾಯವಾಗಿ ಬೆಳಕಾಗುತ್ತದೆ. ಹಾಗೆಯೇ ದೇವರ ಕೃಪೆಯೆಂಬ ದೀಪ ಉರಿದರೆ ಎಷ್ಟೋ ಜನ್ಮಜನ್ಮಾಂತರದ ಪಾಪಗಳೆಲ್ಲಾ ನಾಶವಾಗಿ ಭಕ್ತಿ ಪ್ರಕಾಶ ಮನಸ್ಸನ್ನು ತುಂಬುತ್ತದೆ'' ಎನ್ನುತ್ತಾರೆ ಪರಮಹಂಸರು.

"ಸ್ವಾಮಿ! ನೀವು ದೇವರ ದರ್ಶನವನ್ನು ಪಡೆದಿರುವಿರಿ ಎಂದು ಎಲ್ಲರೂ ಹೇಳುತ್ತಾರಲ್ಲಾ, ನಮಗೂ ದರ್ಶನ ಸಿಗುವಂತೆ ಅನುಗ್ರಹಿಸಿ'' ಎಂದು ಕೆಲವು ಗೃಹಸ್ಥ ಶಿಷ್ಯರು ಒಂದು ದಿನ ಶ್ರೀರಾಮಕೃಷ್ಣರನ್ನು ಕೇಳಿದರು. ಅದಕ್ಕವರು ನಗುತ್ತಾ,

"ದೇವರ ಕೃಪೆಯಿದ್ದರೆ ನಿಮಗೆ ಅವನ ದರ್ಶನ ಲಭಿಸುತ್ತದೆ. ಆದರೆ ನೀವೂ ಪ್ರಯತ್ನಮಾಡಬೇಕು. ಹಾಲನ್ನು ಕರೆದು, ಮೊಸರು ಮಾಡಿ, ಬೆಣ್ಣೆಯನ್ನು ಕಡೆದು ನಿಮ್ಮ ಬಾಯಿಗೆ ನಾನು ಹಾಕಬೇಕೆನ್ನುವಿರೋ?'' ಎಂದರು.

* * * *

"ಗಾಳಿ ಬೀಸುತ್ತಿರುವಾಗ ಬೀಸಣಿಗೆ ಬೇಕಿಲ್ಲ. ಗಾಳಿಯಿಲ್ಲದಿದ್ದರೆ

ಮಾತ್ರ ಬೀಸಣಿಗೆ ಬೇಕಾಗುತ್ತದೆ. ದೇವರ ಕೃಪೆಯನ್ನು ಪಡೆದನಂತರ ನಮ್ಮ ಪ್ರಯತ್ನಗಳನ್ನೆಲ್ಲಾ ನಿಲ್ಲಿಸಬಹುದು. ಆಗ ಪ್ರಾರ್ಥನೆಯೂ ಬೇಡ, ಜಪವೂ ಬೇಡ, ಧ್ಯಾನ ತಪಗಳೂ ಬೇಡ. ಆತನ ಕೃಪೆಯೊಂದೇ ಸಾಕು. ಗಾಳಿ ಬೀಸದವರಿವಿಗೂ ಬೀಸಣಿಗೆಯಿಂದ ಬೀಸುವುದು ಆವಶ್ಯಕ."

"ನಾನು, ನನ್ನದು ಎಂದು ಭಾವಿಸಿಕೊಳ್ಳುವವರೆವಿಗೂ ದೇವರ ಕೃಪೆಯುಂಟಾಗುವುದಿಲ್ಲ. ನಮ್ಮನ್ನು ಅಹಂಕಾರ ಸುತ್ತುಗಟ್ಟಿರುವ ವರೆವಿಗೂ ಅವನು ದೂರ ನಿಲ್ಲುವನು. ದೇವರೊಬ್ಬನು ಮಾತ್ರ ಸಕಲವನ್ನೂ ನಡೆಸುತ್ತಾನೆಯೆಂದು ತಿಳಿದು ಅಹಂಕಾರವನ್ನು ಸಂಪೂರ್ಣ ತ್ಯಜಿಸಿದರೆ ಆಗ ದೇವರ ಕೃಪೆಯೆಂಬ ಗಾಳಿಗೆ ನಮ್ಮ ಜೀವನ ದೋಣಿಯ ಪಟವನ್ನು ಬಿಚ್ಚಿದ ಹಾಗಾಗುತ್ತದೆ. ಮನಸ್ಸನ್ನು ಅಹಂಕಾರ ಮುಚ್ಚಿದ್ದರೆ ಕೃಪಾ ಗಾಳಿಗೆ ಅವಕಾಶವಿರುವುದಿಲ್ಲ."

* * * *

"ಮಗುವಿನ ಸ್ವಭಾವ ತನ್ನ ಮೈ ಮೇಲೆ ಮಣ್ಣು ಕಸಗಳನ್ನೆರಚಿ ಕೊಳ್ಳುವುದು. ಅದನ್ನು ತೊಳೆದು ಶುದ್ಧಮಾಡಿ ಮಗುವಿನ ಚೆಲುವನ್ನು ನೋಡಿ ಸಂತೋಷಪಡುವುದು ತಾಯಿಯ ಸುಖ. ಹಾಗೆಯೇ ತಪ್ಪು ಮಾಡುವುದು ಜನರ ಸ್ವಭಾವವಾಗಿದ್ದರೂ, ಈಶ್ವರಿಯು ಹೊಲಸನ್ನೆಲ್ಲಾ ತೊಳೆದು ಶುದ್ಧಮಾಡುತ್ತಾಳೆ. ನಾವೆಲ್ಲಾ ಆಕೆಯ ಪ್ರಿಯ ಮಕ್ಕಳು. ಭಯವೇಕೆ? ತಾಯನ್ನು ತಾಯಿಯೆಂದು ತಿಳಿದು ಪ್ರೀತಿ ಸಲಿಗೆಯಿಂದ ವರ್ತಿಸಿರಿ. ಪಾಪಗಳೆಲ್ಲಾ ತೊಲಗಿ ಹೋಗುವುವು."

"ಮಗು! ತಾಯಿಗೆ ಮೋಸಮಾಡಲೆಣಿಸಬೇಡ! ಪ್ರೀತಿಯನ್ನು ತೋರಿಸು, ಈಶ್ವರಿಗೆ "ಮಾತೆ" ಯೆಂಬುದು ಬರಿಯ ಹೆಸರು ಮಾತ್ರವಲ್ಲ. ನಿನ್ನನ್ನು ಹೆತ್ತತಾಯಿ ಯಾರೆಂದು ತಿಳಿದಿರುವಿ? ಈಶ್ವರಿಯಲ್ಲವೇ? ಹೆತ್ತ ತಾಯನ್ನು ಹೇಗೆ ಪ್ರೀತಿಸುತ್ತೀಯೋ ಹಾಗೆಯೇ ನಿನ್ನನ್ನೂ ಸಕಲರನ್ನೂ ಉಂಟುಮಾಡಿದ ಈಶ್ವರಿಯನ್ನು ಪ್ರೀತಿಸು. ಅದರ ಫಲವನ್ನು ತಕ್ಷಣವೇ ಕಾಣುವಿ. ನಿನ್ನ ದೇಹ ಮನಸ್ಸುಗಳು ಕಾಂತಿಮಯವಾಗುವುವು. ಮನಸ್ಸಿನಲ್ಲಿ ಆನಂದ ತುಂಬಿರುತ್ತದೆ. ತಾಯಿಯ ಮಡುಲಲ್ಲಿ ಕುಳಿತು ಆಕೆಯ ಮುಖವನ್ನು ನೋಡಿ ನಗುವ ಕಂದನಂತೆ ಸುಖವನ್ನೂ ಆನಂದವನ್ನೂ ಪಡೆಯುವಿ."

೨೭

# ಭಕ್ತ

"ಸಾವಿರಾರು ವರ್ಷಗಳು ನೀರಿನಲ್ಲಿ ನೆನೆದು ಬಿದ್ದಿದ್ದರೂ ಬೆಣಚು ಕಲ್ಲಿನಲ್ಲಿ ಅಡಗಿರುವ ಬೆಂಕಿ ಆರಿಹೋಗುವುದಿಲ್ಲ. ಉಕ್ಕಿನಿಂದ ಬಡಿದರೆ ಕಿಡಿಯನ್ನು ಕಾರುತ್ತದೆ. ಹಲವು ಸಾವಿರ ವರ್ಷಗಳು ನೀರಿನಲ್ಲಿ ನೆನೆದಿದ್ದರೂ ಕೂಡ ಅದರಲ್ಲಿ ಹುದುಗಿರುವ ಅಗ್ನಿಯ ಶಕ್ತಿ ಸ್ವಲ್ಪವಾದರೂ ನಾಶವಾಗದೆ ಹೊರಬರುತ್ತದೆ. ನಿಜವಾದ ಭಕ್ತನ ಭಕ್ತಿಯೂ ಹೀಗೆಯೆ. ಪ್ರಪಂಚದ ಹೊಲಸು ಅವನ ದೃಢ ಭಕ್ತಿಯನ್ನು ಸ್ವಲ್ಪವೂ ಕೆಡಿಸುವುದಿಲ್ಲ. ಎಷ್ಟೇ ಕಷ್ಟಗಳೊದಗಿದರೂ ಅವನ ಮನಸ್ಸು ಚಂಚಲವಾಗುವುದಿಲ್ಲ. ದೇವರಲ್ಲಿ ಅವನಿಗಿರುವ ಭಕ್ತಿ ಬೆಣಚು ಕಲ್ಲಿನ ಬೆಂಕಿಯ ಹಾಗೆ ಶಾಶ್ವತವಾದುದು. ಉಕ್ಕು ತಾಕಿದೊಡನೆ ಕಲ್ಲಿನಿಂದ ಕಿಡಿಯೇಳುವ ಹಾಗೆ ದೇವರ ಹೆಸರನ್ನು ಕೇಳಿದೊಡನೆ ಅವನ ಹೃದಯದಿಂದ ಭಕ್ತಿಯೆಂಬ ಅಗ್ನಿ ಹೊರಚಿಮ್ಮುತ್ತದೆ."

"ದುಃಖವೂ ದೂಷಣೆಯೂ ಆಗಿಂದಾಗ್ಗೆ ಭಕ್ತರನ್ನು ತಾಕುವುದು. ಆದರೆ ಒರೆಗಲ್ಲಿನಲ್ಲಿ ಚಿನ್ನವನ್ನು ತಿಕ್ಕಿ ಪರಿಶೀಲಿಸುವ ಹಾಗೆ ಈ ಕಷ್ಟಗಳೆಲ್ಲಾ ಭಕ್ತನ ಪರೀಕ್ಷೆಗಾಗಿ ಒದಗುತ್ತವೆ. ಆತನ ಭಕ್ತಿ ಈ ಶೋಧನೆಗಳಲ್ಲಿ ಜಯವನ್ನು ಹೊಂದಿ ಸ್ಥಿರಪಡುತ್ತದೆ."

"ಇಂದ್ರಿಯಗಳ ಮೂಲಕ ಉಂಟಾಗುವ ಭೋಗದಾಸೆಗಳಿಂದ ಹೇಗೆ ತಪ್ಪಿಸಿಕೊಳ್ಳುವುದು? ದೇವರ ಸ್ಮರಣೆ ಧ್ಯಾನಗಳಲ್ಲಿ ಆನಂದವನ್ನು ಪಡೆಯುವ ಅಭ್ಯಾಸವನ್ನು ಮಾಡಿದರೆ ಇಂದ್ರಿಯಗಳಿಂದ ಉಂಟಾಗುವ ಅಪಾಯ ದೂರವಾಗುತ್ತದೆ. ಇಂದ್ರಿಯ ಸುಖದ ಬಲೆಗೆ ಸಿಕ್ಕದೆ ತಪ್ಪಿಸಿಕೊಳ್ಳಬೇಕಾದರೆ ಭಗವಂತನ ಧ್ಯಾನದಲ್ಲಿ ಆನಂದವನ್ನು ಅನುಭವಿಸುವುದಕ್ಕೆ ಅಭ್ಯಾಸಮಾಡಬೇಕು. ಎಲ್ಲೆಯಿಲ್ಲದ ಈ ಆನಂದದ ಅನುಭವವಾದೊಡನೆ ಅಲ್ಪಸುಖದಾಸೆಗಳು ಬಾಡಿಹೋಗುತ್ತವೆ. ದೇವರ ಧ್ಯಾನದ ರುಚಿಯನ್ನು ಕಂಡ ಭಕ್ತ ಮೊದಲು ಕ್ಷಣಿಕ ಸುಖವನ್ನೂ ಬಳಿಕ ದುಃಖವನ್ನೂ ಉಂಟು ಮಾಡುವ ಇಂದ್ರಿಯ ಸುಖಗಳನ್ನು ಬಯಸಿ ಹುಡುಕುವುದಿಲ್ಲ; ನಿಜವಾದ ಸುಖವನ್ನು ಇಂದ್ರಿಯಗಳ ಮೂಲಕ ಪಡೆಯಲಾಗುವುದಿಲ್ಲವೆಂದರಿತ ಬಳಿಕ

ತನ್ನನ್ನು ತಾನೇ ಕಷ್ಟಪಡಿಸಿಕೊಳ್ಳುವನೆ? ಕಲ್ಲುಸಕ್ಕರೆಯ ಸವಿಯನ್ನುಂಡ ವನು, ಕಸ ಮಣ್ಣು ಸೇರಿದ ಬೆಲ್ಲದುಂಡೆಯನ್ನು ಬಯಸುವುದಿಲ್ಲ. ಅರಮನೆ ಯಲ್ಲಿ ಸುಪ್ಪತ್ತಿಗೆಯ ಮೇಲೆ ಮಲಗಿ ನಿದ್ರಿಸಿದವನು ಹೊಲಸು ತುಂಬಿದ ಕೇರಿಯ ಗುಡಿಸಲನ್ನು ಹುಡುಕಿಕೊಂಡು ಹೋಗಿ ಮಣ್ಣುನೆಲದ ಮೇಲೆ ಮಲಗುವುದಿಲ್ಲ. ಭಗವಂತನಲ್ಲಿ ತನ್ಮಯನಾಗಿ ಸಚ್ಚಿದಾನಂದವನ್ನು ಪಾನ ಮಾಡಿದ ಭಕ್ತ ಹೆಂಡವನ್ನು ಬಯಸುವುದಿಲ್ಲ."

* * * *

"ಇಂದ್ರಿಯ ಸುಖದಾಸೆ ಬಯಸುವ ಸಂದರ್ಭವುಂಟಾದರೆ ಆ ಕ್ಷಣವೇ ಮನಸ್ಸನ್ನು ದೇವರಕಡೆಗೆ ತಿರುಗಿಸು. ಇದನ್ನು ಅಭ್ಯಾಸಮಾಡಿದರೆ ಎಲ್ಲಾ ಅಪಾಯಗಳನ್ನೂ ದಾಟಿ ಸಾಗಬಹುದು. ಎಲ್ಲಿದ್ದರೂ ಏಕಾಂತದಲ್ಲೂ ಕೂಡ ಈಶ್ವರಿಯು ಪಕ್ಕದಲ್ಲಿಯೇ ಇರುವಳು ಎಂದರಿತ ಭಕ್ತನಿಗೆ ಅಪಾಯ ವೆಲ್ಲಿಯದು? ಯಾವ ಹಣದ ಗಂಟಾಗಲಿ ಯಾವ ಹೆಂಗಸಿನ ಸೌಂದರ್ಯ ವಾಗಲಿ ಅವನಿಗೆ ಅಪಾಯವನ್ನುಂಟುಮಾಡುವುದಿಲ್ಲ."

"ಕೀರ್ತಿಯಾಸೆಗೆ ಭಕ್ತಿ ಪೂಜೆಗಳನ್ನಾಚರಿಸಿದರೆ ಅದು ನಿಜವಾದ ಭಕ್ತಿಯಲ್ಲ, ನಿಜವಾದ ಪೂಜೆಯೂ ಅಲ್ಲ. ಮೌನವಾಗಿ ಏಕಾಂತದಲ್ಲಿ ಆಚರಿಸುವ ಭಕ್ತಿಯೇ ಸತ್ಯ. ಗದ್ದಲ ಅಟ್ಟಹಾಸಗಳೊಡನೆ ಮಾಡುವ ಭಗವದಾರಾಧನೆಯೆಲ್ಲಾ ಪ್ರಯೋಜನವಿಲ್ಲದ ಬರಿಯ ವೇಷ."

ನದಿ ಪರ್ವತದ ಹೊಳೆ ಬಂಡೆಗಳ ನಡುವೆ ರಭಸದಿಂದ ಧುಮುಕಿ ಓಡಿ, ಬಳಿಕ ಮೈದಾನದಲ್ಲಿ ಗಾಂಭೀರ್ಯವನ್ನು ತಾಳಿ ವಿಶಾಲವೂ ಆಳವೂ ಆದ ನದಿಯಾಗಿ ಹರಿಯತ್ತದೆ. ಭಕ್ತನ ಹೃದಯವೂ ಹಾಗೆಯೇ. ಆತನ ಭಕ್ತಿ ಪ್ರವಾಹ ದುಃಖ, ತಡೆ, ಸಂದೇಹ, ಅಪನಂಬಿಕೆಯೆಂಬ ಬಂಡೆಗೆ ತಾಕಿ, ಧುಮುಕಿ, ಪ್ರವಹಿಸಿ, ಕಡೆಗೆ ಅವೆಲ್ಲವನ್ನೂ ದಾಟಿ ಜ್ಞಾನ ಬಯಲಿನಲ್ಲಿ ಶಾಂತಿಯಿಂದ ಸ್ಥಿರವಾಗಿ ಹರಿಯುವುದು. ಮಧ್ಯೆ ಮಧ್ಯೆ ಉಂಟಾಗುವ ಕಳವಳ ಚಿಂತೆಗಳು ಸುಲಭವಾಗಿ ಪರಿಹಾರವಾಗಿ ಸಮ ನೆಲೆಯು ಸ್ಥಿರ ಪಡುವುದು. ಭಕ್ತನ ಮನಸ್ಸಿನಲ್ಲುಂಟಾಗುವ ಕಳವಳ ಕ್ಷಣಮಾತ್ರ ದುಃಖವನ್ನುಂಟುಮಾಡಬಲ್ಲದು. ಬೇಗ ಕರಗಿ ಮರೆಯಾಗುವುದು.

"ಭಕ್ತ ಭಗವಂತನ ಮಗು. ಮಗುವಿಗೆ ಕಣ್ಣೀರೇ ಬಲ. ಹರಿ ನಾಮವನ್ನು ಕೇಳಿದ ಮಾತ್ರದಲ್ಲಿ ರೋಮಾಂಚನವುಂಟಾಗುವುದೂ, ಕಣ್ಣೀರು ಸುರಿಯುವುದೂ, ಭಕ್ತನ ಲಕ್ಷಣ. ನಿಮ್ಮಲ್ಲಿ ಈ ಲಕ್ಷಣ

ಗಳಿದ್ದರೆ ಇದೇ ನಿಮ್ಮ ಕಡೆಯ ಜನ್ಮ. ಸಂಸಾರದಿಂದ ಮೋಕ್ಷ ನಿಮಗೆ ಕಾದು ನಿಂತಿದೆ, ಎಂಬುದನ್ನು ತಿಳಿಯಿರಿ.''

## ೨೮

## ಸುಳ್ಳು ಕಳ್ಳತನ ಇನ್ನೇಕೆ?

ಬಿಡುಗಡೆಯನ್ನು ಹೊಂದಿ ಆಯಿತು; ನಮ್ಮ ದೇಶ ಪ್ರಜಾಪ್ರಭುತ್ವವನ್ನು ಪಡೆದದ್ದಾಯಿತು. ಪ್ರಪಂಚದಲ್ಲಿ ಅತಿ ಉನ್ನತ ಮತ್ತು ಗೌರವ ಸ್ಥಾನವನ್ನು ಭಾರತದೇಶ ಗಳಿಸಿದೆ. ನಮ್ಮ ಮುಖಂಡವನ್ನು ಇತರ ದೇಶಗಳ ಮುಖ್ಯಾಧಿಪತಿಗಳೂ ಹಿರಿಯರೂ ಪ್ರಶಂಸಿಸಿ ಗೌರವಿಸುತ್ತಾರೆ. ಇಷ್ಟು ಉನ್ನತ ಗೌರವಸ್ಥಾನವನ್ನು ಪಡೆದಿದ್ದರೂ ಏಕೆ ನಾವು ಇನ್ನೂ ಭಿಕ್ಷುಕರ ಹಾಗೂ ಮೋಸಗಾರರಾಗಿಯೂ ವರ್ತಿಸುತ್ತೇವೆ.?

ಸುಳ್ಳು ಮೋಸವೂ ಬದುಕುವ ಮಾರ್ಗವೆಂದೇಕೆ ನಾವು ಎಣಿಸುತ್ತೇವೆ? ಎಂಜಲನ್ನು ಹುಡುಕಿ ತಿನ್ನುವ ನೀಚರ ಹಾಗೆ ಏಕೆ ನಡೆದುಕೊಳ್ಳುತ್ತೇವೆ? ಭಾರತ ದೇವಿಯ ಹಿರಿಮೆ ಉನ್ನತಿಗಳನ್ನರಿಯದೆ ಅನ್ಯಾಯವಾಗಿ ನಮ್ಮನ್ನು ನಾವೇ ಏಕೆ ಕೀಳುಪಡಿಸಿಕೊಳ್ಳುತ್ತೇವೆ?

ಈ ವಿಷಯಗಳನ್ನು ಕುರಿತು ಚಿಂತಿಸಿ ವ್ಯಾಕುಲ ಹೊಂದುವ ದೇಶಭಕ್ತರಿಗೆ ಶ್ರೀರಾಮಕೃಷ್ಣರು ಆಗಿನ ಕಾಲದಲ್ಲಿ ಹೇಳಿದ ಕಥೆಯೊಂದನ್ನು ವಿವರಿಸಬಹುದು.

* * * *

"ಒಂದು ದಿವಸ ಕಾಡಿನಲ್ಲಿ ಮೇಯುತ್ತಿದ್ದ ಒಂದು ಕುರಿಯ ಹಿಂಡಿನ ಮೇಲೆ ಒಂದು ಹುಲಿ ನೆಗೆಯಿತು. ಹುಲಿಯ ಹೊಟ್ಟೆಯಲ್ಲಿ ಮರಿಯಿದ್ದಿತು. ಆಗ ಅದಕ್ಕೆ ಪ್ರಸವಕಾಲವಾದ್ದರಿಂದ, ಹಿಂಡಿನ ಮೇಲೆ ಬಿದ್ದ ರಭಸದಲ್ಲಿ ಹುಲಿಯು ಆ ಕ್ಷಣವೇ ಮರಿಯನ್ನು ಪ್ರಸವಿಸಿ ಪ್ರಾಣಬಿಟ್ಟಿತು.''

"ಮರಿ ಬದುಕಿಕೊಂಡು, ಕುರಿಗಳ ನಡುವೆ ಬೆಳೆಯುತ್ತಾ ಕುರಿಗಳ ಹಾಗೆಯೇ ಹುಲ್ಲು ಮೇಯುತ್ತಿದ್ದಿತು. ತನ್ನ ಸ್ವಂತ ಆಕಾರ ಅದಕ್ಕೆ ಸ್ವಲ್ಪವೂ ಗೊತ್ತಿರಲಿಲ್ಲ. ಕುರಿಗಳ ಸ್ವಭಾವವನ್ನೇ ಅದು ಅನುಸರಿಸಿತು.''

"ಕೆಲವು ವರುಷ ಕಳೆಯಿತು. ಒಂದು ದಿನ ಬೇರೊಂದು ಹುಲಿ ಈ ಕುರಿಮಂದೆಯ ಮೇಲೆ ಬಿದ್ದಿತು. ಕುರಿಗಳು ದಿಕ್ಕಾಪಾಲಾಗಿ ಓಡಿ

ದವು. ಆಗ ಹುಲಿ ಮರಿಯೂ ಅವುಗಳೊಂದಿಗೆ ಓಡಿತು. ಹುಲಿ ತನ್ನ ಜಾತಿಗೆ ಸೇರಿದ ಈ ಮರಿಯನ್ನು ನೋಡಿ ಆಶ್ಚರ್ಯದಿಂದ ಅದನ್ನಟ್ಟಿಸಿ ಹೋಗಿ ಹಿಡಿಯಿತು. ಹುಲಿಮರಿ ಕುರಿಯ ಹಾಗೆ 'ಬೇ, ಬೇ,' ಎಂದು ಅರಚಿ ಕೊಂಡಿತು. ಆಗ ದೊಡ್ಡ ಹುಲಿ ಕುರಿ ಹುಲಿಯನ್ನು ಒಂದು ಕೊಳದ ಹತ್ತಿರಕ್ಕೆ ಬಲಾತ್ಕಾರವಾಗಿ ಎಳೆದುಕೊಂಡುಹೋಗಿ ತಣ್ಣೀರಿನಲ್ಲಿ ಪ್ರತಿಬಿಂಬಿಸಿದ ಅದರ ನಿಜ ಸ್ವರೂಪವನ್ನು ತೋರಿಸಿ, 'ಎಲೈ ಮೂಢ ಮಗುವೇ! ನೀನೂ ನಾನೂ ಒಂದೇ ಜಾತಿಗೆ ಸೇರಿದವರು. ಅಗೋ ನೋಡು, ನನ್ನ ಹಾಗೆಯೇ ನೀನೂ ಇರುವಿ. ಏಕೆ ಕುರಿಯ ಹಾಗೆ ಹೆದರಿ ಓಡುತ್ತೀ? ನೀನೂ ನನ್ನ ಹಾಗೆ ಹುಲಿ, ಭಯಪಡಬೇಡ!' ಎಂದಿತು. ಹೀಗೆ ಹೇಳಿ ಕುರಿಮಾಂಸದ ತುಂಡೊಂದನ್ನು ಅದರ ಬಾಯಿಗೆ ಹಾಕಿ 'ತಿನ್ನು ತಿನ್ನು!' ಎಂದಿತು. ಮೊದಲು ಮರಿ ತಿನ್ನಲಿಲ್ಲ. 'ಬೇ, ಬೇ!' ಎಂದರಚಿ ಮಾಂಸವನ್ನು ನೋಡಿ ಅಸಹ್ಯಪಟ್ಟಿತು. ಸ್ವಲ್ಪ ಹೊತ್ತಿನೊಳಗೆ ನಾಲಿಗೆಯನ್ನು ಸೋಂಕಿದ್ದ ಮಾಂಸದ ರುಚಿ ಅದಕ್ಕೆ ಚೆನ್ನಾಗಿ ಅಂಟಿ, ಹುಲಿ ಸ್ವಭಾವ ಪ್ರಕಟವಾಯಿತು. ಮಾಂಸದ ತುಂಡನ್ನು ತಿಂದು ಹಾಕಿತು; ಇನ್ನೂ ಬೇಕೆಂದು ಕೇಳಿತು. ಅಷ್ಟುಕಾಲವೂ ಅಡಗಿದ್ದ ನಿಜಸ್ವಭಾವ ಬಹಳ ಬೇಗ ಮೇಲಾಗಿ ಅದನ್ನಾಕ್ರಮಿಸಿತು. ನೀನು ಯಾರೆಂಬುದನ್ನು ಈಗ ತಿಳಿದು ಕೊಂಡೆಯಾ? ನನ್ನೊಂದಿಗೆ ಬಾ. ಕುರಿಯ ಹಿಂಡಿನೆಡೆ ನಿನಗಿನ್ನು ಕೆಲಸ ವಿಲ್ಲ,' ಎಂದು ಹೇಳಿ ದೊಡ್ಡ ಹುಲಿಯು ಮರಿಯನ್ನು ತನ್ನೊಂದಿಗೆ ಕರೆದು ಕೊಂಡು ಹೋಯಿತು."

* * * *

ಹಿಂದಿನ ಗುಲಾಮಗಿರಿಯ ಬಾಳಿನ ಗುಣವಿಶೇಷಗಳನ್ನು "ಛೀ" ಯೆಂದು ತ್ಯಜಿಸಿ, ಬೇಗನೆ ನಮಗುಚಿತವಾದ ಗೌರವವನ್ನು ಪಡೆಯೋಣ. ಬಡತನ ದುಃಖಮಯವಲ್ಲ, ನೀಚತನ ದುಃಖವನ್ನುಂಟುಮಾಡುವುದು. ಬಡತನದಲ್ಲೂ ಹಿರಿಮೆಯಿಂದ ಬಾಳಬಹುದು. ಅಯೋಗ್ಯತನ ಬೇಡ. ನಮ್ಮ ಭಾರತದೇವಿಯ ಹೊಸ ಗೌರವ ಹಿರಿಮೆಗಳನ್ನು ಕಾಪಾಡೋಣ. ಕಳ್ಳತನ, ಸುಳ್ಳು ಮೊದಲಾದ ಹೆದರಿಕೆಯ ನೀಚ ಸ್ವಭಾವವನ್ನು ತ್ಯಜಿ ಸೋಣ.



## ೨೯

# ಪ್ರಾರ್ಥನೆ

"ಇದು ಬೇಕು; ಅದು ಬೇಡ" ಎಂದು ದೇವರನ್ನು ಪ್ರಾರ್ಥಿಸ ಬೇಡ. "ಎಲ್ಲಾ ನಿನ್ನಿಚ್ಛೆ" ಎಂದು ಅವನಿಗೆ ಬಿಟ್ಟುಬಿಡು.

ಹೀಗೆಂದು ಎಲ್ಲಾ ಶಾಸ್ತ್ರಗಳೂ ಸಾರುತ್ತವೆ. ಆದರೂ ಮನುಷ್ಯ ಸ್ವಭಾವ ಇದಕ್ಕೆ ವಿರುದ್ಧ. ಎಷ್ಟೋ ಕಾಲದಿಂದ ಜನರು ದೇವರ ಪ್ರಾರ್ಥನೆ ಯನ್ನು ಮಾಡಿ ಬರುತ್ತಾರೆ. "ಎಲ್ಲಾ ನಿನ್ನ ಕೃಪೆ; ಸಕಲವೂ ನಿನಗೆ ಸೇರಿದ್ದು" ಎಂದು ಬಾಯಲ್ಲಿ ಹೇಳಿದರೂ, ಮನಸ್ಸಿನಲ್ಲಿ "ನನಗೆ ಇದನ್ನು ಕೊಡು, ಅದನ್ನು ಮಾಡು" ಎಂದೇ ಬೇಡುತ್ತೇವೆ.

ದೇವರ ಕೆಲಸವೂ ಸ್ವಭಾವವೂ ನಮ್ಮ ಅರಿವಿಗೆ ನಿಲುಕುವುದಿಲ್ಲ. ಯಾವುದು ಒಳ್ಳೆಯದು, ಯಾವುದು ದುಃಖವನ್ನು ತರುವುದು ಎಂಬ ವಿಷಯವನ್ನು ನಾವು ಸರಿಯಾಗಿ ಅರಿತುಕೊಳ್ಳಲಾರೆವು. ಆದುದರಿಂದ ಎಲ್ಲವನ್ನೂ ಭಗವಂತನಿಗೇ ಬಿಟ್ಟು ಬಿಡುವುದು ಒಳ್ಳೆಯದು. ಇದರಲ್ಲಿ ಸಂದೇಹವೇ ಇಲ್ಲ. ಆದರೂ ಚೇತನ ವಸ್ತುಗಳಾದ ಜೀವಿಗಳು ಒಬ್ಬ ರೊಡನೊಬ್ಬರು ಸಂಭಾಷಿಸುವ ಹಾಗೆ ದೇವರೊಂದಿಗೂ ಮಾತನಾಡುವುದ ರಲ್ಲಿ ತಪ್ಪೇನೂ ಇಲ್ಲ. ಅದು ಮನುಷ್ಯ ಸ್ವಭಾವ. ಗಂಡ ಹೆಂಡತಿಯರು ಮನಸ್ಸನ್ನು ಬಿಚ್ಚಿ ಮಾತನಾಡಿಕೊಳ್ಳುವ ಹಾಗೆ ಭಗವಂತನು ಎಲ್ಲಾ ವಿಷಯದಲ್ಲೂ ಯಜಮಾನನಾದರೂ ಆತನೊಂದಿಗೆ ಪ್ರಾರ್ಥನೆಯ ಮೂಲಕ ಧಾರಾಳವಾಗಿ ಸಂಭಾಷಿಸುವುದರಲ್ಲಿ ದೋಷವಿಲ್ಲ. ಅದು ಒಳ್ಳೆಯದು. ದಿನವೂ ಒಂದು ಹೊತ್ತಾದರೂ ಈಶ್ವರನೊಂದಿಗೆ ಮಾತನಾಡಿ, ಅತ್ತು, ಆಟವಾಡಿ, ಸಂಭಾಷಿಸುತ್ತಿದ್ದರೆ ನಮ್ಮ ಮನೋವಾಕ್ಕಾಯಗಳು ಶುದ್ಧ ವಾಗುತ್ತವೆ. ಪ್ರಾರ್ಥನೆಯ ಫಲವಾಗಿ ಮನಸ್ಸಿನ ಹೊಲಸೆಲ್ಲಾ ದೂರ ವಾಗುತ್ತದೆಯೆಂಬುದು ನಿಶ್ಚಯ. ಅನುಭವದಲ್ಲಿ ಈ ಸತ್ಯವನ್ನು ಸಕಲರೂ ಕಾಣಬಹುದು.

"ಪ್ರಾರ್ಥನೆಯನ್ನು ಮಾಡುವ ವಿಧಾನವಾವುದು? ಮನಸ್ಸಿನಲ್ಲೇ ಮೌನವಾಗಿ ಪ್ರಾರ್ಥಿಸಬೇಕೇ ಅಥವಾ ಇತರರಿಗೆ ಕೇಳಿಸುವ ಹಾಗೆ ಮಾತಿನ ಮೂಲಕ ಮಾಡುವುದೇ?" ಎಂದೊಬ್ಬರು ಕೇಳಿದ್ದಕ್ಕೆ ಭಗವಾನ್ ಶ್ರೀರಾಮ ಕೃಷ್ಣರು ಹೇಳುತ್ತಾರೆ:

"ಹೇಗೆ ಇಷ್ಟವೋ ಹಾಗೆ ಮಾಡಬಹುದು. ಮೆಲ್ಲನೆ ಅತ್ತರೂ ಅವನ ಕಿವಿಗೆ ಕೇಳಿಸುತ್ತದೆ. ಅವನ ಕಿವಿ ಇರುವೆಯ ಕಾಲಿನ ಸಪ್ಪಳವನ್ನು ಕೂಡ ಆಲಿಸುವುದು."

"ಪ್ರಾರ್ಥನೆಯಿಂದ ಫಲವುಂಟೆ?"

"ಮನಸ್ಸೂ ವಾಕ್ಕೂ ಏಕೀಭವಿಸಿ ಹೃದಯ ಶುದ್ಧಿಯಿಂದ ಮಾಡುವ ಪ್ರಾರ್ಥನೆ ಖಂಡಿತವಾಗಿಯೂ ಫಲದಾಯಕವಾಗುತ್ತದೆ. ಬಾಯಿನಲ್ಲಿ ಮಾತ್ರ 'ಸಕಲವೂ ನಿನ್ನದು' ಎಂದೂ ಹಾಗೆನ್ನುವಾಗಲೇ ಮನಸ್ಸಿನಲ್ಲಿ 'ಇದೆಲ್ಲಾ ನನ್ನದು' ಎಂದೆಣಿಸಿಯೂ ಪ್ರಾರ್ಥಿಸಿದರೆ ಅದರಿಂದೇನೂ ಪ್ರಯೋಜನವಿಲ್ಲ. ಪ್ರಾರ್ಥನೆ ಮಾಡುವಾಗ ನಿನ್ನನ್ನು ನೀನೇ ಮೋಸ ಗೊಳಿಸಬೇಡ. ಭಗವಂತನ ಮುಂದೆ ಸುಳ್ಳಾಡಬೇಡ. ಮನಸ್ಸೂ ಕೆಲಸ ಹೊಂದಿಕೊಂಡಿರಬೇಕು. ಶುದ್ಧ ಮನಸ್ಸಿನಿಂದಲೂ ಸದ್ಭಾವನೆಯಿಂದಲೂ ಪ್ರಾರ್ಥಿಸು. ಭಗವಂತ ನಿರಾಕರಿಸುವುದಿಲ್ಲ. ನಿನ್ನ ಮೇಲೆ ಆತನಿಗೆ ಎಲ್ಲೆಯಿಲ್ಲದ ಪ್ರೇಮ. ಕಾಲಕಾಲದಲ್ಲಿ ಮಾಡಬೇಕಾದುದನ್ನು ಮಾಡಿ ಭಾರವನ್ನು ಅವನಿಗೆ ಬಿಡು. ಯಾವುದಕ್ಕೂ ಕಳವಳಪಡಬೇಡ."

"ಸಮುದ್ರದಲ್ಲಿ ಪ್ರಯಾಣ ಮಾಡುವಾಗ ದಿಕ್ಕನ್ನು ತೋರಿಸುವ ಉತ್ತರಮುಖಿಯನ್ನು ಸರಿಯಾಗಿಟ್ಟುಕೊಂಡಿರುವವರಿವಿಗೂ ಹಡಗಿಗೆ ಅಪಾಯವಿಲ್ಲ. ಸೂಜಿಗಲ್ಲಿನ ಮುಳ್ಳು ಯಾವಾಗಲೂ ಉತ್ತರಮುಖಿ ಯಾಗಿರುವ ಹಾಗೆ ಮನಸ್ಸು ಎಡೆಬಿಡದೆ ದೇವರೆಡೆಯೇ ತಿರುಗಿ ನೆಲೆಸಿದ್ದರೆ ಜೀವನದ ಹಡಗು ದಡವನ್ನು ಮುಟ್ಟುವುದು, ಭಯವಿಲ್ಲ."

"ಪಾಮರರೂ ಇತರರೂ ಹಳೆಯ ವಿಧಾನಗಳಲ್ಲಿ ಪೂಜಿಸುವ ಮೂರ್ತಿ ಗಳನ್ನು ನಿನ್ನಿಂದ ಪೂಜಿಸಲಾಗದಿದ್ದರೆ ಚಿಂತೆ ಬೇಡ. 'ನಿನಗೆ ಆಕಾರವು ಉಂಟೋ ಇಲ್ಲವೋ ನನಗದು ಗೊತ್ತಿಲ್ಲ. ನಿನ್ನ ಸ್ವರೂಪವನ್ನು ನಾನು ಅರಿಯೆ. ಹೇಗಾದರೂ ಸರಿ, ನನ್ನನ್ನು ಅನುಗ್ರಹಿಸು' ಎಂದು ಬೇಡಿಕೊ."

"ದೇವರು ನಿಶ್ಚಯವಾಗಿಯೂ ನಿನ್ನನ್ನು ಗಮನಿಸುವನು. ಮಗು! ಅವನ ಹಾಗೆ ನಿನ್ನನ್ನು ಆದರಿಸುವವರು ಯಾರೂ ಇಲ್ಲ. ನೀನು ಅವನಲ್ಲಿ ಬೇಡಿಕೊಂಡದ್ದನ್ನೆಲ್ಲಾ ಅವನು ಆಲಿಸಿರುವನು. ನಿನಗೆ ಒಳ್ಳೆಯದು ಯಾವುದೆಂಬುದು ಅವನಿಗೆ ಗೊತ್ತು. ಒಂದು ದಿವಸ ನಿನಗೆ ಖಂಡಿತ ವಾಗಿಯೂ ಆತನ ದರ್ಶನವು ಸಿಗುವುದು. ಮರಣೋನ್ಮುಖನಾಗಿರುವಾಗ ಲಾದರೂ ಅದು ಸಿಗುತ್ತದೆ. ಪ್ರಾರ್ಥನೆ ಮಾಡುವುದನ್ನು ಮಾತ್ರ ಬಿಡಬೇಡ.

ಕಷ್ಟದಲ್ಲಾದರೂ ಸುಖದಲ್ಲಾದರೂ ಸಂಭಾಷಣೆಗೆ ಅವನಂತಹ ಸ್ನೇಹಿತ ರಾರೂ ಇಲ್ಲ. ಪ್ರಾರ್ಥನೆಯೇ ಜೀವಿಗಳು ದೇವರೊಂದಿಗೆ ಮಾಡುವ ಸಂಬಾಷಣೆ."

ಜನರು ಮೂಕರಾಗಿರುವುದು ಸಾಧ್ಯವಿಲ್ಲ. ಭಕ್ತಿಪೂರಿತವಾದ ಪ್ರಾರ್ಥನೆಯೆನ್ನುವುದು ಈ ನಿಯಮದಲ್ಲಡಗುವುದು.

## ೩೦
## ನಂದಾದೀಪ

ಸುಳ್ಳು ಮೋಸಗಳಿಂದ ಮಾತ್ರವೇ ಕೆಲಸವಾಗುತ್ತದೆ ಎಂದೆಣಿಸುವುದು ವಾಡಿಕೆಯಾಗಿ ಹೋಗಿರುವುದರಿಂದ ಧರ್ಮೋಪದೇಶಗಳನ್ನೆಲ್ಲಾ "ಇದರಿಂದೇನು ಪ್ರಯೋಜನ?" ಎಂದು ಜನರು ತಳ್ಳಿಹಾಕುವರು. ಆದರೂ ಮುಕ್ತಿಮಾರ್ಗವು ಇದಲ್ಲ. ಧರ್ಮವೇ ಸುಖ, ಧರ್ಮವೇ ಚಾತುರ್ಯ, ಧರ್ಮವೇ ಐಶ್ವರ್ಯ, ಧರ್ಮ ಕೆಟ್ಟರೆ ದೇಶ ಮುಂದುವರಿಯುವುದಿಲ್ಲ. ಎಲ್ಲರೂ ದರಿದ್ರರಾಗುವರು. ಮೋಸವೂ ಕಚ್ಚಾಟಗಳೂ ಸಮಾಜವನ್ನು ನಾಶಮಾಡುವುವು. ಸಮಾಜ ಕೆಟ್ಟರೆ ನಾವೆಲ್ಲರೂ ಕೆಡುತ್ತೇವೆ.

"ಕೆಲವು ಬೆಸ್ತರ ಹೆಂಗಸರು ಸಂತೆಯಲ್ಲಿ ಮೀನನ್ನು ಮಾರಿ ಊರಿಗೆ ಹಿಂದಿರುಗಿದರು. ಆ ದಿನ ಸಂತೆಯಲ್ಲಿ ಬಹಳ ಹೊತ್ತು ಕಳೆದಿದ್ದರಿಂದಲೂ ದಾರಿಯಲ್ಲಿ ಮಳೆ ಶುರುವಾದ್ದರಿಂದಲೂ ಕತ್ತಲಾಗುವ ಮುನ್ನ ಊರು ಸೇರುವುದಕ್ಕಾಗಲಿಲ್ಲ. ಅಲ್ಲಿಯೇ ಒಂದು ಗ್ರಾಮದಲ್ಲಿ ಹೂವಿನ ತೋಟಗಾರನೊಬ್ಬನ ಗುಡಿಸಿಲ ಬಳಿ ನಿಂತರು. ತೋಟಗಾರನು ಒಳ್ಳೆಯವ. 'ರಾತ್ರಿ ಇಲ್ಲಿಯೇ ತಂಗಿ ಬೆಳಗಾಗುತ್ತಲೇ ಹೋಗಿ' ಎಂದನು. ಹೆಂಗಸರು ಸರಿಯೆಂದು ಅಲ್ಲಿಯೇ ಆ ರಾತ್ರಿಯನ್ನು ಕಳೆದರು."

"ಆದರೆ ರಾತ್ರಿ ಬಹಳ ಹೊತ್ತು ಅವರಿಗೆ ನಿದ್ರೆ ಹತ್ತಲಿಲ್ಲ. ಕಾರಣವೇನೆಂದರೆ, ಅವರು ಮಲಗಿದ್ದೆಡೆ ತೋಟಗಾರನು ಬುಟ್ಟಿಯ ತುಂಬ ಮಲ್ಲಿಗೆ ಹೂಗಳನ್ನು ಬಿಡಿಸಿಟ್ಟಿದ್ದನು. ಮಾರನೆಯ ಬೆಳಿಗ್ಗೆ ಅದನ್ನು ಕೊಡುವುದಕ್ಕಾಗಿ ರಾತ್ರಿಯೇ ಸಿದ್ಧಪಡಿಸಿಟ್ಟಿದ್ದ. ಹೂವಿನ ಸುವಾಸನೆ ಹೆಂಗಸರಿಗೆ ಸರಿಹೋಗಲಿಲ್ಲ. ಎಷ್ಟು ಹೊತ್ತು ಹೊರಳಿ ಪ್ರಯತ್ನಪಟ್ಟರೂ ನಿದ್ರೆಹತ್ತಲೇ ಇಲ್ಲ. ಬಳಿಕ ಅವರಲ್ಲೊಬ್ಬಳು ಎದ್ದು ಕುಳಿತು, 'ಈ

ವಾಸನೆ ನಿಲ್ಲುವ ಹಾಗೆ ತೋರಲಿಲ್ಲ, ಬರಬರುತ್ತಾ ಹೆಚ್ಚಾಗುತ್ತಿದೆ! ಇದಕ್ಕೇನು ಮಾಡೋಣ?' ಎಂದಳು. ಸ್ವಲ್ಪಹೊತ್ತು ಯೋಚಿಸಿ ಅವರು ಸ್ವಲ್ಪ ತಣ್ಣೀರನ್ನು ತಂದು ಮೀನು ಬುಟ್ಟಿಗಳ ಮೇಲೆ ಚಿಮುಕಿಸಿ ಬುಟ್ಟಿಗಳನ್ನು ಪಕ್ಕದಲ್ಲಿಟ್ಟುಕೊಂಡು ಮಲಗಿದರು. ಬುಟ್ಟಿಯ ದುರ್ಗಂಧವು ಬಹಳ ಬೇಗ ಮಲ್ಲಿಗೆಯ ವಾಸನೆಯನ್ನಡಗಿಸಿತು. ಹೆಂಗಸರೂ ಸುಖವಾಗಿ ಗೊರಕೆ ಹೊಡೆಯುತ್ತಾ ನಿದ್ರಿಸಿದರು."

ಅವರವರ ವಾಡಿಕೆಯೇ ಅವರವರ ಸ್ವರ್ಗ. ಒಳ್ಳೆಯಸಹವಾಸವೂ ವಾಡಿಕೆ ರೂಢಿಗಳೂ ಇಲ್ಲದೆ ಹೋದರೆ ದುರ್ಮಾರ್ಗವೇ ಮೇಲಾಗಿ ತೋರುತ್ತದೆ. ಲೌಕಿಕ ಚಾತುರ್ಯಕ್ಕೆ ಆವಶ್ಯಕವಾದ ಗಟ್ಟಿಗತನ ಇದೇ ಎಂದೂ ಎಣಿಸುತ್ತಾರೆ.

ಈ ಕಲಿಯುಗದಲ್ಲಿ ನಾವು ಮಾಡಬೇಕಾದ ತಪಸ್ಸು ಒಂದೇ. ಅದೇ ಸತ್ಯ ಹೇಳುವುದು. ಅದನ್ನು ಕೂಡ ನಾವು ಮಾಡುವುದಿಲ್ಲ. ವ್ಯಾಪಾರಸ್ಥರು, ಕಛೇರಿಯಲ್ಲಿ ಕೆಲಸಮಾಡುವವರು ಇವರೆಲ್ಲರೂ ಕೂಡ ಸತ್ಯಸಂಧರಾಗಿರಬೇಕು. ಸತ್ಯವೇ ಗಟ್ಟಿಗತನ. ಅದೇ ಭಗವಂತನನ್ನು ಸಾಧಿಸುವ ಲೌಕಿಕ ಚಾತುರ್ಯ.

ಮನೆಯಲ್ಲಿ ಹಬ್ಬದ ದಿನಗಳಲ್ಲಿ ನಂದಾ ದೀಪವನ್ನು ಹೊತ್ತಿಸುತ್ತೇವೆ. ಅದು ಉರಿಯುತ್ತಲೇ ಇರಬೇಕು. ಆರಿಹೋದರೆ ಕುಟುಂಬಕ್ಕೆ ಯಾವುದಾದರೂ ಕಷ್ಟ ನಷ್ಟಗಳೊದಗುತ್ತವೆ. ಹಾಗೆಯೇ ದೇವರ ಸ್ಮರಣೆಯೆಂಬುದು ಒಂದು ನಂದಾದೀಪ. ಹೃದಯ ಕಮಲದಲ್ಲಿ ಹೊತ್ತಿಸಿದ ಆ ದೀಪ ನಂದಿಹೋಗದಂತೆ ನೋಡಿಕೊಳ್ಳಬೇಕು. ಯಾವ ಲೌಕಿಕ ಕೆಲಸದಲ್ಲಿ ಮಗ್ನರಾಗಿದ್ದರೂ ಆಗಾಗ್ಗೆ ಆ ದೀಪಕ್ಕೆ ಎಣ್ಣೆಯನ್ನು ಹಾಕಿ ಬತ್ತಿಯನ್ನು ಸರಿಮಾಡುತ್ತಿರಬೇಕು. ಇದರಿಂದ ಯಾವ ಕೆಲಸಕ್ಕೂ ಅಡಚಣೆಯುಂಟಾಗುವುದಿಲ್ಲ. ಅದರ ಬದಲು ಮಾಡುವ ಕಾರ್ಯಗಳೆಲ್ಲಾ ಜಯಪ್ರದವಾಗುತ್ತವೆ.

## ೩೧
## ಕಮಲಿಯ ಕನ್ನಡಿ

"ಅಮ್ಮಾ, ನನಗೆ ನೀನು ಕೊಟ್ಟಿರುವ ಕನ್ನಡಿಯಲ್ಲಿ ಮುಖ ಸರಿಯಾಗಿ ಕಾಣುವುದಿಲ್ಲ!" ಎಂದಳು ಕಮಲಿ. ಅದಕ್ಕವಳತಾಯಿ,

"ಕನ್ನಡಿಯನ್ನು ಚೆನ್ನಾಗಿ ಶುದ್ಧಿಮಾಡಿ ಇಟ್ಟುಕೊ. ಅದರ ಮೇಲೆ ಎಣ್ಣೆಯೂ ಧೂಳೂ ಬಿದ್ದು ಅದರ ಹೊಳಪನ್ನು ಮುಚ್ಚಿವೆ. ಬಟ್ಟೆಯಿಂದೊರಸಿ ಬಳಿಕ ನೋಡು, ಮುಖ ಚೆನ್ನಾಗಿ ಕಾಣಿಸುವುದು!" ಎಂದು ಹೇಳಿ. ತಾನೇ ಕನ್ನಡಿಯನ್ನೊರಸಿ ಮಗಳಿಗೆ ಕೊಟ್ಟಳು.

ಕಮಲಿಯು ನಗುತ್ತಾ "ಹೌದು, ಹೌದು!" ಎಂದು ಮುದ್ದು ಮುಖವನ್ನು ಕನ್ನಡಿಯಲ್ಲಿ ನೋಡಿಕೊಳ್ಳುತ್ತಾ ತೃಪ್ತಿಹೊಂದಿದಳು.

ಧ್ಯಾನದಲ್ಲಿ ಭಗವಂತನನ್ನು ಕಾಣುವ ರಹಸ್ಯವೂ ಇದೇ. ಮನಸ್ಸನ್ನು ನಿರ್ಮಲವಾಗಿಟ್ಟುಕೊಂಡರೆ ಅದರಲ್ಲಿ ದೇವರು ಕಾಣಿಸುವನು. ಆಸೆಯೆಂಬ ಹೊಲಸು ಬಿದ್ದ ಮನಸ್ಸಿನಲ್ಲಿ ಆ ದಿವ್ಯ ಸ್ವರೂಪ ಪ್ರತಿ ಬಿಂಬಿಸುವುದಿಲ್ಲ. ಶ್ರೀರಾಮಕೃಷ್ಣರು ದೇವಿಯನ್ನು ಕಂಡು ಆನಂದ ಪ್ರವಾಹದಲ್ಲಿ ಮುಳುಗಿ ತೇಲಿದರು. ಅದಕ್ಕೆ ಕಾರಣ ಅವರ ಮನಸ್ಸಿನ ನೈರ್ಮಲ್ಯ. ಅವರು ಇತರರಿಗೆ ಮಾಡುವ ಉಪದೇಶವೂ ಇದೇ. ಈ ಉಪದೇಶವನ್ನು ನಾವೆಲ್ಲಾ ಅನುಸರಿಸಿ ಅದರ ಫಲವನ್ನು ಪಡೆಯಬಹುದು.

"ಕೊಳದ ನೀರಿನಲ್ಲಿ ದಡದ ಮೇಲಿರುವ ಮರ ಗಿಡಗಳೂ ಆಕಾಶವೂ ಬೆಳಕೂ ಚೆನ್ನಾಗಿ ಕಾಣುತ್ತವೆ. ಗಾಳಿ ಬೀಸಿ ನೀರು ಚಲಿಸಿದರೆ ಇವು ಮರೆಯಾಗುತ್ತವೆ. ನಾವು ದೇವರನ್ನು ಕಾಣುವುದೂ ಹೀಗೆಯೇ. ಮನಸ್ಸನ್ನು ಆಸೆ ಮೋಹಗಳೆಂಬ ಪಾಚಿಯು ಮುಚ್ಚದ ಹಾಗೂ ಕೋಪ ದ್ವೇಷಗಳೆಂಬ ಗಾಳಿಯು ಬೀಸಿ ಮನಸ್ಸನ್ನು ಕಲಕದ ಹಾಗೂ ನೋಡಿಕೊಂಡರೆ ಅದರಲ್ಲಿ ಭಗವಂತನ ತೇಜೋಮಯವಾದ ಸ್ವರೂಪವನ್ನು ಕಾಣಬಹುದು. ಆಗಾಗ್ಗೆ ಅಸೂಯೆ, ಕೋಪ, ದ್ವೇಷಗಳ ಬಿರುಗಾಳಿಯೆದ್ದು ಬೀಸಿ ಮನಸ್ಸನ್ನು ಚಂಚಲಗೊಳಿಸುತ್ತಲೂ, ಆಸೆ, ಅಹಂಕಾರಗಳ ಪಾಚಿಯು ಮನಸ್ಸನ್ನು ಎಡೆಬಿಡದೆ ಮುಚ್ಚಿಕೊಂಡೂ ಇದ್ದರೆ ಅದರಲ್ಲಿ ದೇವರನ್ನು ಕಾಣುವುದು ಹೇಗೆ?"

"ಚಿಕ್ಕ ಪುಟ್ಟ ವಿಷಯಗಳಲ್ಲಿಯ ಆಸೆಗಳನ್ನು ತೃಪ್ತಿಪಡಿಸಿಕೊಂಡು, ದೊಡ್ಡ ಆಸೆಗಳನ್ನೆಲ್ಲಾ ವಿವೇಕದ ಸಹಾಯದಿಂದ ಜಯಿಸಿ ದೂರಮಾಡಬೇಕು. ಪಡೆದ ವಿದ್ಯಾಭ್ಯಾಸವನ್ನೆಲ್ಲಾ ವಾದಕ್ಕೂ ಅಹಂಕಾರವನ್ನು ಬೆಳೆಸುವುದಕ್ಕೂ ಖರ್ಚು ಮಾಡದೆ ವಿವೇಕವನ್ನು ವೃದ್ಧಿಪಡಿಸಿಕೊಳ್ಳುವುದಕ್ಕೆ ಉಪಯೋಗಿಸಬೇಕು. ಆಸೆ ಮೋಹಗಳನ್ನೆಲ್ಲಾ ತ್ಯಜಿಸುವ ವಿವೇಕವನ್ನು ವಿದ್ಯಾಭ್ಯಾಸದಿಂದ ಪಡೆಯಬೇಕು. ಹಾಗೆ ಮಾಡಿದರೆ

ಮನಸ್ಸು ನಿರ್ಮಲವಾದ ನೀರಿನಂತೆ ಸ್ವಚ್ಛವಾಗಿ ಭಗವಂತನ ಮುಖವನ್ನು ಪ್ರತಿಬಿಂಬಿಸುತ್ತದೆ.''

ಸಂಸಾರ ಜೀವನ ಒಂದು ಬಹಳ ಆಳವಾದ ಭಾವಿ. ಮಗುವು ಭಾವಿಯ ಹತ್ತಿರ ಹೋಗಿ ಇಣಿಕಿ ನೋಡಿದರೆ ನಾವು ''ಅಯ್ಯೊ, ಅಲ್ಲಿ ನಿಲ್ಲಬೇಡ, ಇಣಿಕಿನೋಡಬೇಡ, ದೂರ ಬಾ!'' ಎಂದೆಚ್ಚರಿಸುತ್ತೇವೆ. ಸಂಸಾರವೆಂಬ ಪಾತಾಳಭಾವಿಯೂ ಕೂಡ ಬಹಳ ಅಪಾಯಕರ. ಒಮ್ಮೆ ಭಾವಿಯಲ್ಲಿ ಬಿದ್ದರೆ ಪಾರಾಗುವುದು ದುರ್ಲಭವೇ ಸರಿ.

ಲೋಭವೂ ಕೋಪವೂ ನಾವು ಎಷ್ಟೇ ಪ್ರಯತ್ನಮಾಡಿದರೂ ನಮ್ಮನ್ನು ಬಿಟ್ಟು ಹೋಗುವುದಿಲ್ಲವಲ್ಲಾ! ಇದಕ್ಕೇನು ಮಾಡುವುದು?

''ಆಸೆ, ಚಿಂತೆ, ಕೋಪಗಳೆಲ್ಲಾ ಮನುಷ್ಯ ಸ್ವಭಾವದಲ್ಲಿ ಬೇರೂರಿ ನಿಂತಿವೆ. ಅವನ್ನು ಕಿತ್ತಿಸೆಯುವುದಕ್ಕಾಗದಿದ್ದರೆ ಅದನ್ನು ಸರಿಯಾದ ಕಡೆ ತಿರುಗಿಸಿ ಇಟ್ಟುಕೊಳ್ಳಬೇಕು. ಪ್ರೇಯಸಿಯ ಮೇಲಿನ ಪ್ರೇಮವನ್ನೆಲ್ಲಾ ಪರಮಾತ್ಮನಲ್ಲಿಡು. ನಿನ್ನ ಆಸೆ ಶಕ್ತಿಗಳನ್ನೆಲ್ಲಾ ದೇವರನ್ನು ಪಡೆಯುವ ಪ್ರಯತ್ನದಲ್ಲಿ ಉಪಯೋಗಿಸು. ನಿನ್ನ ಕೋಪವನ್ನೂ ಸಹ ಭಗವಂತನ ಮೇಲೆ ತೋರಿಸು! ನನಗೇಕೆ ದರ್ಶನವನ್ನು ಕೊಡುವುದಿಲ್ಲ, ಎಂದು ಆತನ ಮೇಲೆ ಕೋಪಿಸಿಕೊ. ಜನರ ಮೇಲೆ ನಿನಗುಂಟಾಗುವ ಆತುರ ಸಿಟ್ಟು ಗಳನ್ನೆಲ್ಲಾ ಸರ್ವೇಶ್ವರನ ಮೇಲೆ ಸುರಿದು ತೀರಿಸಿಕೊ'' ಎನ್ನುತ್ತಾರೆ ಪರಮ ಹಂಸರು. ಮನುಷ್ಯ ಸ್ವಭಾವವನ್ನು ಜಯಿಸುವ ಮಾರ್ಗವಿದು.

* * * *

ಕ್ರೂರಸ್ವಭಾವದ ಕಾಡು ಮೃಗಗಳನ್ನೆಲ್ಲಾ ಪರಮ ಸಾಧುಗಳನ್ನಾಗಿ ಮಾಡುತ್ತೇವಲ್ಲವೇ? ಆನೆಯ ಮದವನ್ನಡಗಿಸಿ ಅದು ನಾವು ಹೇಳು ವುದನ್ನು ಕೇಳಿ ನಮಗಧೀನವಾಗುವ ಹಾಗೆ ಪಳಗಿಸುತ್ತೇವೆ. ನಮ್ಮ ಮನಸ್ಸೂ ಕೂಡ ಪಳಗಿಸಿ ಅಡಗಿಸಬಲ್ಲ ಒಂದು ಮೃಗ. ಪ್ರಯತ್ನ ವಿಫಲ ವಾಗುವುದಿಲ್ಲ. ಮನಸ್ಸೆಂಬ ಕಾಡುಮೃಗವನ್ನು ಹತೋಟಿಯಲ್ಲಿಡದೆ ಸ್ವೇಚ್ಛೆ ಯಾಗಿ ಕಾಡಿನಲ್ಲಿ ಅಲೆದು ಮೇಯುವುದಕ್ಕೆ ಬಿಡಬೇಡಿ. ಉಪಯೋಗ ವಿಲ್ಲದ ಯೋಚನೆಗಳೇ ದಟ್ಟವಾದ ಕಾಡು. ಅದರಲ್ಲಿ ತನ್ನಿಷ್ಟದಂತೆ ಮನಸ್ಸನ್ನು ಮೇಯುವುದಕ್ಕೆ ಬಿಟ್ಟರೆ ಬಹಳ ಬೇಗ ಅದು ಕಾಡಿನಲ್ಲಿ ಸಂಚರಿಸುವ ಮದದಾನೆಯಂತಾಗುತ್ತದೆ. ಬಳಿಕ ಅದನ್ನು ಹಿಡಿದು ಅಡಗಿಸಿ ಪಳಗಿಸುವುದು ಸಾಧ್ಯವಿಲ್ಲದೆ ಹೋಗುವುದು. ಮೋಸ ಹೋಗ ಬೇಡಿ!

ವಿವೇಕವೇ ಆನೆಯನ್ನಡಗಿಸುವ ಅಂಕುಶ.

ಮೋಹವನ್ನೂ ಆಸೆಯನ್ನೂ ಸ್ವಲ್ಪ ಸ್ವಲ್ಪವಾಗಿ ತ್ಯಜಿಸಬೇಕು. ಹಾಗೆ ಮಾಡದಿದ್ದರೆ ವಿವೇಕ ಬೆಳೆಯುವುದಿಲ್ಲ. ಕಳೆ ಬೇರೂರಿ ಬೆಳೆದರೆ ಪಯಿರೆಲ್ಲಾ ಹಾಳಾಗುತ್ತದೆ; ಆಗಾಗ್ಯೆ ಅವುಗಳನ್ನು ಕಿತ್ತಿಸೆಯುತ್ತಿದ್ದರೆ ಪಯಿರು ಚೆನ್ನಾಗಿ ಬೆಳೆದು ಫಲದಾಯಕವಾಗುತ್ತದೆ. ಹಾಗೆ ನಾವು ಮುಂಜಾಗ್ರತೆಯ ಕ್ರಮಗಳನ್ನು ಕೈಗೊಳ್ಳದಿದ್ದರೆ ಪಯಿರು ನಾಶವಾಗಿ ಹೊಲ ಗದ್ದೆಗಳು ಕಾಡಾಗುವುದು. ಹಾಗೆಯೇ ವಿವೇಕ. ಆಸೆ ಮೋಹ ಗಳೆಂಬ ಕಳೆಯನ್ನು ಆಗಾಗ್ಗೆ ಕಿತ್ತಿಸೆದು ಮನಸ್ಸನ್ನು ಶುದ್ಧಿಮಾಡುತ್ತಿದ್ದರೆ ಮಾತ್ರವೇ ವಿವೇಕವೆಂಬ ಪಯಿರು ಚೆನ್ನಾಗಿ ಬೆಳೆದು ಫಲಕೊಡುತ್ತದೆ.

## ೩೨
## ಉದ್ಧಾರವೂ ಉಪದೇಶವೂ

ಕಥೆ, ಕಾಲಕ್ಷೇಪ, ಪ್ರಸಂಗ ಮೊದಲಾದ ಧರ್ಮೋಪದೇಶ ಪ್ರಯತ್ನ ಗಳಲ್ಲಿ ಹಲವರು ಮಗ್ನರಾಗಿ ಕೆಲಸಮಾಡುತ್ತಾರೆ. ಇವರೆಲ್ಲಾ ಚೆನ್ನಾಗಿ ಓದಿ ವಿದ್ಯಾಭ್ಯಾಸ ಮಾಡಿದ ಶಾಸ್ತ್ರಪಂಡಿತರೆಂಬುದರಲ್ಲಿ ಸಂದೇಹವಿಲ್ಲ. ಇವರು ಮಾಡುವ ಪ್ರಯತ್ನಗಳೂ ಕೂಡ ಸದುದ್ದೇಶದಿಂದಲೇ. ಆದರೆ ಜನರನ್ನು ತಿದ್ದಬೇಕಾದರೆ ಭಕ್ತಿಯ ಶಕ್ತಿ ಬಹಳ ಆವಶ್ಯಕ. ಬೋಧಿಸುವ ವರ ಭಕ್ತಿ ಕೇಳುವವರ ಹೃದಯಕ್ಕೆ ನೇರವಾಗಿ ತೂರಿ ಪರಿಣಾಮವನ್ನುಂಟು ಮಾಡುತ್ತದೆ. ಕೌಶಲ್ಯದಿಂದ ಪ್ರಸಂಗಮಾಡುವುದು ಮಾತ್ರ ಸಾಲದು.

"ಮತಪ್ರಚಾರ ಮಾಡುವವರನ್ನು ಕುರಿತು ನಿಮ್ಮ ಅಭಿಪ್ರಾಯ ವೇನು?" ಎಂದೊಬ್ಬರು ಭಗವಾನ್ ಶ್ರೀರಾಮಕೃಷ್ಣರನ್ನು ಕೇಳಿದರು. ಅದಕ್ಕವರು ಹೇಳುತ್ತಾರೆ:

"ಒಬ್ಬನು ತನ್ನ ಮನೆಯಲ್ಲಿ ತನಗೇ ಊಟಕ್ಕೆ ಸಾಲದಿರುವಾಗ ನೂರಾರು ಜನರನ್ನು ಔತಣಕ್ಕೆ ಕರೆದರೆ ಅವನ ಸ್ಥಿತಿಯು ಹೇಗಿರುವುದು? ಸಾಧಾರಣವಾಗಿ ತತ್ತ್ವಪ್ರಚಾರ ಮಾಡುವವರ ಸ್ಥಿತಿಯೂ ಅಷ್ಟೇ. ಅವರ ಮನಸ್ಸಿನಲ್ಲಿರುವ ಭಕ್ತಿ ಅವರು ಪಾರಾಗುವುದಕ್ಕೇ ಸಾಲದು. ಹಾಗಿರು ವಾಗ ಇತರರಲ್ಲಿ ಭಕ್ತಿಯನ್ನು ಹೇಗೆ ಉಂಟುಮಾಡುವರು?"

ಮೊಟ್ಟಮೊದಲು ನಿಮ್ಮ ಮನಸ್ಸಿನಲ್ಲಿ ದೇವರನ್ನು ಪ್ರತಿಷ್ಠೆಮಾಡಿ. ಬಳಿಕ ಇತರರಿಗೆ ಅದನ್ನು ಬೋಧಿಸಲು ಪ್ರಸಂಗ ಉಪದೇಶಗಳನ್ನು ಪ್ರಾರಂಭಿಸಿ. ಒಬ್ಬನು ತನ್ನ ಮನಸ್ಸಿನಲ್ಲಿ ಕಾಮಕ್ರೋಧ ಮೋಹ ಗಳನ್ನೆಲ್ಲಾ ತುಂಬಿಸಿಕೊಂಡು ಇತರರಿಗೆ ಭಕ್ತಿ ವೈರಾಗ್ಯವನ್ನುಪದೇಶಿಸಿದರೆ ಏನು ಪ್ರಯೋಜನ? ಉಪದೇಶಮಾಡುವುದು ಸುಲಭ ಕಾರ್ಯವೇ. ಆದರೆ ಅದು ಮೂರ್ತಿಯಿಲ್ಲದ ಹಾಳುಗುಡಿಯಲ್ಲಿ ಶಂಖ ಬಾರಿಸಿದ ಹಾಗೆ.

* * * *

ನಮ್ಮಲ್ಲಿ ತಪ್ಪುಗಳೆಷ್ಟೋ ಇರಬಹುದು. ಆದರೂ ನಿಜವಾದ ಭಕ್ತಿ ಯನ್ನು ಮನಸ್ಸಿನಲ್ಲಿ ಸ್ಥಿರಗೊಳಿಸಿ ದೇವರನ್ನು ಶರಣುಹೊಕ್ಕು ಪಾಪಗಳಿಂದ ಪಾರಾಗಿ ಇತರರಿಗೂ ಮಾರ್ಗದರ್ಶಕರಾಗಬಹುದು.

ಇಂತಹ ಒಬ್ಬರನ್ನು ಭಗವಾನ್ ಶ್ರೀರಾಮಕೃಷ್ಣರು ಕಂಡು ಕೇಳಿದ ರಂತೆ: "ಏನು ಸ್ವಾಮಿಗಳೇ! ಧರ್ಮೋಪದೇಶವನ್ನು ಬಲವಾಗಿ ಮಾಡು ತ್ತಿದ್ದೀರಿ. ನಿಮ್ಮ ಸ್ವಂತ ಜೀವನದ ಕಥೆಯೇ ಬೇರೆ ವಿಧವಾಗಿರುವು ದಲ್ಲಾ! ನಿಮ್ಮಲ್ಲಿ ಇಷ್ಟು ದೋಷಗಳನ್ನಿಟ್ಟುಕೊಂಡು ನೀವು ಹೇಗೆ ಜನ ರನ್ನು ಆಕರ್ಷಿಸಿ ಅವರಲ್ಲಿ ಭಕ್ತಿಯನ್ನುಂಟುಮಾಡುತ್ತೀರಿ? ಇದರ ರಹಸ್ಯವೇನು?"

ಅದಕ್ಕವರು, "ನಾನು ಮಹಾನೀಚನೆಂಬುದೇನೋ ನಿಜ; ಆದರೂ ದೇವರ ಕೃಪೆಯೆಂಬುದೊಂದು ಇದೆಯಲ್ಲಾ! ನೀಚಪರಕೆಯೂ ಕೂಡ ಬೀದಿಗಳನ್ನೂ ಮನೆಗಳ್ನೂ ಗುಡಿಸಿ ಚೊಕ್ಕಟ ಮಾಡುವುದಕ್ಕೆ ಉಪಯೋಗ ವಾಗುತ್ತದೆಯಲ್ಲವೆ? ಆ ತರಹದ ಹೊಲಸು ಯಂತ್ರ ನಾನು!" ಎಂದುತ್ತರ ಕೊಟ್ಟರಂತೆ!

"ಇದಕ್ಕೆ ಪ್ರತಿಯಾಗಿ ನಾನೇನೂ ಹೇಳುವುದಕ್ಕಾಗಲಿಲ್ಲ!" ಎನ್ನುತ್ತಾರೆ ಶ್ರೀರಾಮಕೃಷ್ಣರು.

* * * *

ಒಬ್ಬನ ಮನಸ್ಸಿನಲ್ಲಿ ಭಕ್ತಿ ನೆಲೆಸಿ ಹೃದಯ ಕಮಲದಲ್ಲಿ ಭಗವಂತನು ಪ್ರತಿಷ್ಠೆಯಾದನಂತರ ಯಾವ ದೋಷವಿದ್ದರೂ ಮುಕ್ತಿಮಾರ್ಗಕ್ಕೆ ಅಡ್ಡಿ ಯಾಗುವುದಿಲ್ಲ. ಸೂರ್ಯ ಕಿರಣಗಳು ಬೆಳಕನ್ನೂ ಶಾಖವನ್ನೂ ಹರಡುವ ಹಾಗೆ ಆತನ ಭಕ್ತಿ ಇತರರ ಹೃದಯಗಳನ್ನು ಹೊಕ್ಕು ಪರಿಣಾಮವನ್ನುಂಟು ಮಾಡುತ್ತದೆ.

೩೩

# ಸಂದೇಹ ಬೇಡ!

“ಸ್ವಭಾವವನ್ನು ಜಯಿಸುವುದು ಹೇಗೆ ಸಾಧ್ಯ?” ಎಂದು ಭಯ ಪಡಬೇಡ. ಅಚ್ಚಕಪ್ಪಾಗಿರುವ ಇದ್ದಲನ್ನು ಬೆಂಕಿ ಸ್ಪರ್ಶಮಾಡಿದೊಡನೆ ಅದು ಏನಾಗುತ್ತದೆ? ಅದರ ಸ್ವಾಭಾವಿಕ ಕಪ್ಪು ನಾಶವಾಗಿ ಅದು ಬೆಂಕಿಯ ಸ್ವಭಾವವನ್ನು ಪಡೆಯುತ್ತದೆ. ಹಾಗೆಯೇ ಮನುಷ್ಯ ಸ್ವಭಾವವೂ ಕೂಡ, ಜ್ಞಾನಾಗ್ನಿಯ ಸ್ಪರ್ಶವಾದೊಡನೆ ತನ್ನ ಸ್ವಾಭಾವಿಕ ಅಜ್ಞಾನ ದೋಷಗಳನ್ನು ಕಳೆದುಕೊಳ್ಳುತ್ತದೆ.

ಮನಸ್ಸನ್ನು ಸ್ವಾಧೀನಪಡಿಸಿಕೊಂಡು ಅದರಲ್ಲಿ ಕೊಳೆ ಸೇರದಂತೆ ಶುದ್ಧವಾಗಿಟ್ಟುಕೊಂಡರೆ ಯಾವ ಕೆಲಸವನ್ನೂ ಸಾಧಿಸಬಹುದು.

“ಅಗಸ ತಂದುಕೊಟ್ಟ ಹೊಸ ಬಟ್ಟೆಗೆ ಯಾವ ಬಣ್ಣವಾದರೂ ಹಾಕಬಹುದು. ಆ ಬಟ್ಟೆಯ ಹಾಗೆಯೇ ನಮ್ಮ ಮನಸ್ಸೂ. ಒಳ್ಳೆಯ ಸಹವಾಸವೂ ಪ್ರಯತ್ನವೂ ಇದ್ದರೆ ಅದನ್ನು ಒಳ್ಳೆಯ ದಾರಿಗೆ ತಿರಿಗಿಸಬಹುದು. ಇಂಗ್ಲೀಷನ್ನು ಕಲಿತವರ ಮಾತುಗಳನ್ನು ಗಮನಿಸಿ. ಯಾವಾಗಲೂ ಇಂಗ್ಲೀಷು ಪದಗಳನ್ನು ಸೇರಿಸಿಯೇ ಮಾತನಾಡುತ್ತಾರೆ. ಸಂಸ್ಕೃತ ವಿದ್ವಾಂಸರೋ, ಯಾವಾಗಲೂ ಸಂಸ್ಕೃತ ಶ್ಲೋಕಗಳ ಉದಾರಹಣೆಯಲ್ಲಿಯೇ ಮಾತುಗಳನ್ನು ಸಾಗಿಸುವರು. ಸತ್ಸಂಗದವರ ಮನುಸ್ಸು ವಕ್ರದಾರಿಗಳಲ್ಲಿ ಹೋಗುವುದಿಲ್ಲ. ಕೆಟ್ಟ ಸಹವಾಸದಲ್ಲಿ ಕಾಲ ಕಳೆಯುವವರ ಚಿಂತೆ ಯಾವಾಗಲೂ ಕೆಟ್ಟ ವಿಷಯಗಳಲ್ಲೇ ನೆಲಸುವುದು. ಬಟ್ಟೆಗೆ ಬಣ್ಣವೇರುವಹಾಗೆ ಜನರ ಮನಸ್ಸು ಸಹವಾಸ ಗುಣದೋಷಗಳನ್ನು ಬೇಗ ಅವಲಂಬಿಸುತ್ತದೆ. ಸಹವಾಸ ಒಳ್ಳೆಯದಾಗಿದ್ದರೆ ಒಳ್ಳೆಯ ಗುಣವೂ, ಕೆಟ್ಟದಾಗಿದ್ದರೆ ನೀಚಸ್ವಾಭಾವವೂ ಮೇಲಾಗುವುದೆಂಬುದರಲ್ಲಿ ಸಂದೇಹವಿಲ್ಲ.”

ತನ್ನನ್ನು ತಾನೇ ಮೋಸ ಮಾಡಿಕೊಳ್ಳಬಾರದು. ನಿನ್ನನ್ನು ನೀನು ಮೋಸಗೊಳಿಸಿದರೆ ನಷ್ಟ ನಿನಗೇ. ಸತ್ಯವೂ ಭಕ್ತಿಯೂ ದೇವರನ್ನು ಪಡೆಯುವ ಮಾರ್ಗ. ದೇವರನ್ನು ಮರೆತರೆ ನಾಶವಾಗುವಿ. ಭಕ್ತಿಯಿಲ್ಲದೆ ಬಾಳಿಲ್ಲ.

ಭಕ್ತಿ ಬೇರೆ ಜ್ಞಾನ ಬೇರೆ ಅಲ್ಲ. ಭಕ್ತಿ ಸತ್ಯದಲ್ಲಿ ಬೆರೆತರೆ ಅದೇ ಜ್ಞಾನ.

“ಇತರರನ್ನು ಕೊಲ್ಲಬೇಕಾದರೆ ಕತ್ತಿಯೂ ಪಿಸ್ತೂಲೂ ಬೇಕು. ಆತ್ಮಹತ್ಯೆಗೆ ಒಂದು ಸೂಜಿಯಿದ್ದರೂ ಸಾಕು. ಹಾಗೆಯೇ ಇತರರ ಅಜ್ಞಾನವನ್ನು ನೀಗಿಸಿ ಜ್ಞಾನವನ್ನುಂಟುಮಾಡಬೇಕಾದರೆ ಹಲವಾರು ಶಾಸ್ತ್ರಗಳನ್ನು ಓದಬೇಕು ನಿಜ. ಜ್ಞಾನೋದಯಕ್ಕೆ ಸಣ್ಣ ಮಂತ್ರ ಸಾಕು. ಆದರೆ ಭಕ್ತಿಯಿರಬೇಕು.”

ಭಕ್ತಿಯೇ ಎಲ್ಲಾ ಮತಗಳಿಗೂ ಬೇರು. ಭಕ್ತಿಯೊಂದಿದ್ದರೆ ಅವರವರ ಮತಾಚಾರಗಳು ಅವರವರಿಗೆ ಸಾಕು. ಭಕ್ತಿಯಿಲ್ಲದ ಒಬ್ಬನು ಎಷ್ಟೇ ಪಾಂಡಿತ್ಯವನ್ನು ಸಂಪಾದಿಸಿದರೂ ಎಷ್ಟು ಸಲ ಮತವನ್ನು ಬದಲಾಯಿಸಿ ಕೊಂಡರೂ ಜ್ಞಾನವನ್ನು ಪಡೆಯಲಾರ.

* * * *

“ಇಟ್ಟ ಆಹಾರವನ್ನು ಮೂಸಿನೋಡಿ ತಿನ್ನುವುದೂ ಬಿಡುವುದೂ ಮಾಡುವ ಹಸು ಎಷ್ಟು ಹಾಲು ಕೊಡಬಲ್ಲದು? ಯಾವುದನ್ನು ಕೊಟ್ಟರೂ ಆತುರದಿಂದ ತಿನ್ನುವ ಹಸು ಮಾತ್ರ ಕೆಚ್ಚಲು ತುಂಬಿ ಸಮೃದ್ಧಿಯಾಗಿ ಹಾಲು ಕರೆಯುತ್ತದೆ.

ಸಂದೇಹ ತುಂಬಿದ ಮನಸ್ಸಿನಲ್ಲಿ ಜ್ಞಾನವೆಂಬ ಹಾಲು ಉಕ್ಕಿ ಹರಿಯು ವುದಿಲ್ಲ.”

* * * *

ಹೆಚ್ಚಾಗಿ ದಾಹವಾದಾಗ ಒಬ್ಬನು ಕೆರೆಯ ನೀರಿನಲ್ಲಿ ಮಣ್ಣು ಬೆರೆ ತಿವೆ ಎಂದು ದಾಹಶಾಂತಿಯನ್ನು ಮಾಡಿಕೊಳ್ಳದೆ ಹೋಗುವುದಿಲ್ಲ. ಈ ನೀರು ಮಣ್ಣಾಗಿದೆಯೆಂದು ಬೇರೆ ಶುದ್ಧ ಜಲಕ್ಕೋಸುಗ ಭಾವಿಯನ್ನು ತೋಡುವುದಿಲ್ಲ. ದೇವರ ಕೃಪೆಯನ್ನು ಪಡೆಯ ಬಯಸುವುದು ಈ ದಾಹ ದಂತೆಯೇ. ಸಮೀಪದಲ್ಲಿರುವ ಮತಾಚಾರಗಳನ್ನು ದೋಷಪೂರಿತವಾದ ವೆಂದು ತಳ್ಳಿಹಾಕಿ ದಾಹಶಾಂತಿಗಾಗಿ ಬೇರೆ ಮತವನ್ನು ಹುಡುಕಿಕೊಂಡು ಹೋಗುವರೇ? ಅಥವಾ ತಮಗೆಂದು ಪ್ರತ್ಯೇಕ ಮತವೊಂದನ್ನು ಸ್ಥಾಪಿಸ ಹೊರಡುವರೇ? ನಿಜವಾಗಿಯೂ ದಾಹವಿದ್ದಲ್ಲಿ ತನ್ನ ಸ್ವಂತ ಮತಸಹಾಯ ದಿಂದಲೇ ಒಬ್ಬನು ದಾಹವನ್ನು ತೀರಿಸಿಕೊಳ್ಳುವನು. ಹೊಸಮತವನ್ನು ಸ್ಥಾಪಿಸುವುದಕ್ಕೆ ಬೇಕಾದ ಕಲ್ಪನೆಗೂ ಯೋಚನೆಗೂ ಅವನಿಗೆ ಅವಕಾಶ ವೆಲ್ಲಿಯದು?

ಲೋಭಿಯೊಬ್ಬನು ಹಣವನ್ನು ಬಯಸುವಹಾಗೆ ಭಕ್ತನು ಭಗವಂತ

ನನ್ನು ಬಯಸುತ್ತಾನೆ. ನೀರಿನಲ್ಲಿ ಬಿದ್ದು ಮುಳುಗಿ ಸಾಯುವ ಒಬ್ಬನು ಶ್ವಾಸಕ್ಕಾಗಿ ಹೇಗೆ ತತ್ತ್ರಳಿಸುವನೋ ಹಾಗೆಯೇ ದೇವರನ್ನು ಪಡೆಯಬೇಕೆಂದು ಭಕ್ತನು ತತ್ತ್ರಳಿಸುತ್ತಾನೆ.

"ಕುರುಡು ಭಕ್ತಿ ಎಂದು ಪರಿಹಾಸ್ಯವಾಗಿ ಕೆಲವರು ಮಾತಾಡುವುದನ್ನು ಕೇಳಿದ್ದೀರಲ್ಲವೆ? ಇದು ನನಗರ್ಥವೇ ಆಗುವುದಿಲ್ಲ. ಕುರುಡು ಭಕ್ತಿಯೆಂದರೇನು? ಕಣ್ಣಿರುವ ಭಕ್ತಿಯೆಂದೂ ಕಣ್ಣಿಲ್ಲದ ಭಕ್ತಿಯೆಂದೂ ಎರಡು ವಿಧಗಳಿಲ್ಲ. ಜ್ಞಾನವೆಂದೂ ಭಕ್ತಿಯೆಂದೂ ಇರುವುದು. ಆದರೆ ಭಕ್ತಿಯಲ್ಲಿ ಕುರುಡು ಭಕ್ತಿಯೆಂಬ ಅನುಚಿತ ಸಾಧನೆಯೊಂದಿಲ್ಲ. ಭಕ್ತಿಗೆ ಬಾಹ್ಯದೃಷ್ಟಿಯಿಲ್ಲ. ಈ ವಿಚಾರದಲ್ಲಿ ಎಲ್ಲಾ ವಿಧವಾದ ಭಕ್ತಿಯೂ ಕೂಡ ಕುರುಡು ಭಕ್ತಿಯೇ!" ಎನ್ನುತ್ತಾರೆ ಶ್ರೀರಾಮಕೃಷ್ಣರು.

ದೇವರನ್ನು ಬಿಟ್ಟು ಸಂಸಾರವನ್ನು ನಡೆಸುವವರು ದೊಡ್ಡ ಕಷ್ಟ ನಷ್ಟಗಳಿಗೊಳಗಾಗುತ್ತಾರೆ. ಸಂದೇಹವನ್ನು ದೂರಮಾಡಿ ಭಕ್ತಿಯನ್ನಾಚರಿಸಿ. ಈ ಅದ್ಭುತ ಸೃಷ್ಟಿ ಜಗತ್ತೆಲ್ಲಾ ಶೂನ್ಯದಿಂದುಂಟಾಗಲಿಲ್ಲ. ಮನುಷ್ಯ ಚೇತನ, ಚಿಂತನಾಶಕ್ತಿಗಳೆಲ್ಲಾ ಶೂನ್ಯದಿಂದ ಬರಲು ಸಾಧ್ಯವೆ? ಪರವಸ್ತುವನ್ನು ಕುರಿತು ಸಂದೇಹ ಬೇಡ.

* * * *

"ನರಕವನ್ನು ಕುರಿತು ಚಿಂತಿಸಿ ಭಯಪಡಬೇಡಿ. ದೇವರನ್ನು ಧ್ಯಾನಿಸಿ, 'ಮಾಡಬಾರದ ಕೆಲಸಗಳನ್ನು ಮಾಡಿರುವೆ; ಮಾಡಬೇಕಾದ ಕೆಲಸಗಳನೇಕವನ್ನು ಮಾಡದೆ ಬಿಟ್ಟಿರುವೆ. ಅಯ್ಯಾ! ನನ್ನನ್ನು ಕಾಪಾಡು! ಎಂದು ದೈನ್ಯದಿಂದ ಬೇಡಿಕೊಳ್ಳಿ.' ಪಾಪಗಳೆಲ್ಲಾ ಪಲಾಯನವಾಗುತ್ತವೆ!" ಎಂದು ಭಗವಾನ್ ಶ್ರೀರಾಮಕೃಷ್ಣರು ಅನುಗ್ರಹಿಸಿರುತ್ತಾರೆ.

## ೩೪
## ಒಬ್ಬ ಅಜ್ಜಿಗೆ ಉಪದೇಶ

"ಇಡೀ ಬ್ರಹ್ಮಾಂಡವನ್ನೇ ಸೃಷ್ಟಿಸಿರುವಿ, ನಿನ್ನ ಪ್ರಭಾವ ಮಾನವನ ಚಿಂತೆಗೆ ನಿಲುಕುವುದಿಲ್ಲ. ನೀನು ಇದನ್ನು ಮಾಡಿದೆ, ಅದನ್ನು ಮಾಡಿದೆ, ಎಂದೆಲ್ಲಾ ದೇವರನ್ನು ಸ್ತೋತ್ರಮಾಡಿ ಧ್ಯಾನಿಸುವುದರಲ್ಲಿ ಪ್ರಯೋಜನ

ವೇನು?" ಎಂದು ಒಂದು ಸಲ ಶ್ರೀರಾಮಕೃಷ್ಣರು ಬ್ರಹ್ಮಸಮಾಜದ ನಾಯಕರಿಗೆ ಹೇಳಿದರು, ಮತ್ತೂ ಹೇಳುತ್ತಾರೆ:

"ತನ್ನನ್ನು ಹೆತ್ತ ತಂದೆಯೆದುರಿಗೆ ಕುಳಿತು ಮಗನು, 'ಆಹಾ! ನನ್ನ ತಂದೆಗೆ ಎಷ್ಟು ಮಂದಿ ಸೇವಕರು, ಕುದುರೆ, ಗಾಡಿ, ತೋಟಗಳೆಲ್ಲಾ ಇವೆ!' ಎಂದು ಲೆಖ್ಖ ಮಾಡುತ್ತಾನೆಯೇ? ಪ್ರೀತಿಪೂರ್ಣನಾದ ಮಗ ತಂದೆಯ ಐಶ್ವರ್ಯವನ್ನು ಬೆಲೆ ಕಟ್ಟುತ್ತಾ ಮುಗ್ಧನಾಗುವುದಿಲ್ಲ. ತಂದೆಯು ತನ್ನ ಮೇಲೆ ತೋರಿಸುವ ಅಪಾರ ಪ್ರೇಮವನ್ನು ಕೂಡ ಅವನು ದೊಡ್ಡ ವಿಶೇಷವಾಗಿ ಭಾವಿಸುವುದಿಲ್ಲ.

"ನಾವೆಲ್ಲಾ ಭಗವಂತನ ಮಕ್ಕಳು. ಆತನ ವಿಶ್ವಪ್ರೇಮ ಸ್ವಭಾವ ಸಿದ್ಧ. ಅದನ್ನು ಕುರಿತು ಆಶ್ಚರ್ಯಪಡಬೇಕಾಗಿಲ್ಲ. ಆದ್ದರಿಂದ ಇದನ್ನೆಲ್ಲಾ ಕುರಿತು ದೇವರನ್ನು ಸ್ತುತಿಸುವುದನ್ನು ಬಿಟ್ಟು ನೇರವಾಗಿ ಅವನ ಸಾನ್ನಿಧ್ಯ ಕ್ಕಾಗಿ ಪ್ರಯತ್ನ ಪಡಿರಿ. ಪ್ರೇಯಸಿಯು ಪತಿಯ ಬಳಿ ಹೋಗುವಹಾಗೆ ದೇವರ ಹತ್ತಿರ ಹೋಗಿ. 'ಇದನ್ನು ಮಾಡು, ಅದನ್ನು ಮಾಡು!' ಎಂದು ನಿರ್ಭಯವಾಗಿ ಮಗುವೋ ಹೆಂಡತಿಯೋ ಯಜಮಾನನನ್ನು ಕೇಳುವ ಹಾಗೆ ಕೇಳಿ. ಬಹಳ ದೂರದಲ್ಲಿ ನಿಂತು ಸ್ತುತಿಸಿದರೆ ದೇವರನ್ನು ಹೇಗೆ ಪಡೆದು ಆಲಿಂಗಿಸುವಿರಿ? ಅಯ್ಯೋ, ಹೇಗೆ ಹತ್ತಿರ ಹೋಗುವೆ, ಎಂದು ಭಯ ವುಂಟಾಗುವುದು. ಭಗವಂತನು ನಿಮಗೆ ಅತ್ಯಂತ ಸಮೀಪ ಬಂಧು; ಸತಿ ಪತಿಗಳ ಆಪ್ತ ಬಾಂಧವ್ಯ ಸ್ನೇಹಗಳಿಗಿಂತಲೂ, ಹೆಚ್ಚು ಸಲಿಗೆ ಪ್ರೇಮ ಬಾಂಧವ್ಯಗಳೊಡನೆ, ಭಕ್ತನು ಭಗವಂತನೊಂದಿಗೆ ಕ್ರೀಡಿಸುವನು."

ಇದೇ ಭಕ್ತಿ ಮಾರ್ಗದ ರಹಸ್ಯ ಸೂತ್ರ. ಭಕ್ತಿ ಭಾವನೆಯಲ್ಲಿ ಭಯಾಶ್ಚರ್ಯಗಳಿರುವುದಿಲ್ಲ, ನಮ್ರತೆಯೂ ಇಲ್ಲ. ಧೈರ್ಯ, ಪ್ರೇಮ, ದೃಢ ನಂಬಿಕೆ.— ಇವೇ ಭಕ್ತಿಯ ಲಕ್ಷಣ. ಪ್ರಾರಂಭದಲ್ಲಿ ತವಕವೂ ಭಯವೂ ಉಂಟಾಗುವುದು. ಭಕ್ತಿ ದೃಢವಾದೊಡನೆ ಅವು ಮಾಯವಾಗಿ ಧೈರ್ಯ ವುಂಟಾಗುವುದು. ಭಕ್ತ ಪ್ರೀತಿಯಿಂದ ದೇವರನ್ನು ಸಮೀಪಿಸುತ್ತಾನೆ.

* * * *

ಶ್ರೀರಾಮಕೃಷ್ಣರ ಶಿಷ್ಯರಲ್ಲೊಬ್ಬರ ತಾಯಿ ಪರಮಹಂಸರೆಡೆಗೆ ಬಂದು, "ನನಗೆ ವಯಸ್ಸಾಯಿತು. ಇನ್ನು ನಾನು ಸಂಸಾರ ಚಿಂತೆ ಬಿಟ್ಟು ಬೃಂದಾವನಕ್ಕೆ ಹೋಗಿ ರಾಧೆಯ ಸಾನ್ನಿಧ್ಯದಲ್ಲಿ ಸನ್ಯಾಸಿನಿಯಾಗಿರ ಬೇಕೆಂಬುದೇ ನನ್ನಾಸೆ" ಎಂದಳು.

ಪರಮಹಂಸರು ಕಂಡುಕೊಂಡರು,—ಮುದುಕಿಯ ಮನಸ್ಸು ಇದಕ್ಕೆ ಅವಕಾಶ ಕೊಡುವುದಿಲ್ಲ, ಇದು ಬರಿಯ ಒಣ ವೈರಾಗ್ಯ, ಭ್ರಾಂತಿ ವಿರಕ್ತಿ, ಕುಟುಂಬದ ಮೋಹ ಅವಳನ್ನು ಇನ್ನೂ ಬಿಟ್ಟು ಹೋಗಿಲ್ಲ,— ಆಗ ಅವರು ಹೀಗೆಂದರು:

"ಅಮ್ಮಾ! ನಿನಗೆ ನಿನ್ನ ಮೊಮ್ಮಗಳ ಮೇಲಿರುವ ಪ್ರೀತಿಯನ್ನು ನಾನು ಚೆನ್ನಾಗಿ ಬಲ್ಲೆ. ನೀನು ಬೃಂದಾವನಕ್ಕೆ, ಅಥವಾ ಕಾಶಿಗೆ, ಇನ್ನು ಬೇರೆಲ್ಲಿಗಾದರೂ ಹೋದರೂ ಕೂಡ ಮೊಮ್ಮಗಳ ಸ್ಮರಣೆಯನ್ನು ಮಾಡುತ್ತಲೇ ಇರುವಿ! ಆ ಮಗುವಿನ ಆರೋಗ್ಯ ಹೇಗಿದೆಯೋ, ಅವಳನ್ನು ಸರಿಯಾಗಿ ನೋಡಿಕೊಳ್ಳುತ್ತಿರುವರೊ ಇಲ್ಲವೊ ಎಂದು ಯೋಚನೆ ಮಾಡುವಿ. ನಿನ್ನ ದೇಹ ಬೃಂದಾವನದಲ್ಲಿದ್ದರೂ ಮನಸ್ಸೆಲ್ಲಾ ಮೊಮ್ಮಗಳು ಇರುವ ಕಡೆಯೇ ನಿಲ್ಲುವುದು. ಆದ್ದರಿಂದ ಒಂದು ಕೆಲಸ ಮಾಡು: ನಿನ್ನ ಮೊಮ್ಮಗಳೇ ದೇವಿ ರಾಧೆಯೆಂದು ಭಾವಿಸಿ ಅವಳನ್ನು ಪ್ರೀತಿಯಿಂದ ನೋಡಿಕೋ. ಕುಟುಂಬದಲ್ಲಿದ್ದುಕೊಂಡು ಮಗುವನ್ನು ಗಮನಿಸಿ ಸಲಹು. ಮನಸ್ಸಿನಲ್ಲಿ ಮಾತ್ರ ಅವಳೇ ರಾಧೆಯೆಂಬ ಭಾವನೆಯನ್ನು ಸ್ಥಿರಗೊಳಿಸಿ ಪಕ್ವ ಮಾಡಬೇಕು. ಆಗ ಮಗುವಿನ ಮೇಲೆ ನಿನಗಿರುವ ಪ್ರೇಮ ಮೋಹಗಳೆಲ್ಲಾ ದೇವಿಯ ಮೇಲಿನ ಭಕ್ತಿಯಾಗುತ್ತದೆ. ಮಗುವನ್ನೆತ್ತಿಕೊಂಡು ಲಾಲಿಸುವಾಗಲೂ ಆಹಾರವನ್ನುಣಿಸುವಾಗಲೂ ಮುಖವನ್ನು ತೊಳೆದು ಬೊಟ್ಟನ್ನು ಇಟ್ಟು ಅಲಂಕರಿಸುವಾಗಲೂ ಶ್ರೀ ದೇವಿಗೆ ಇದನ್ನೆಲ್ಲಾ ಮಾಡುವುದಾಗಿ ಭಾವಿಸಿಕೊ. ಆಗ ನೀನು ಊರಿನಲ್ಲಿ ಸಂಸಾರ ಮಾಡುತ್ತಿದ್ದರೂ ಬೃಂದಾವನಕ್ಕೆ ಹೋಗಿ ರಾಧಾಕೃಷ್ಣನ ಧ್ಯಾನವನ್ನು ಮಾಡಿ ಸನ್ಯಾಸಿನಿಯಾಗಿ ತಪವನ್ನಾಚರಿಸಿದ ಫಲವನ್ನು ಪಡೆಯುವಿ."

* * * *

ನಾವು ಯಾರನ್ನು ಪ್ರೀತಿಸಿ ಸೇವಿಸಿದರೂ ಆ ಮಗು ಪ್ರೇಯಸಿ ತಾಯಿ ತಂದೆ ಇಲ್ಲ ಸ್ನೇಹಿತನು, ಭಗವಂತನ ಅಥವಾ ಜಗನ್ಮಾತೆಯ ಸ್ವರೂಪವೆಂದು ಭಾವಿಸುವ ಅಭ್ಯಾಸವನ್ನು ಮಾಡಬೇಕೆಂಬುದೇ ಪರಮಹಂಸರು ಉಪದೇಶಿಸುವ ಪೂಜಾವಿಧಾನ. ಇದು ಬೇಗನೇ ಫಲ ಪ್ರದವಾಗುವ ಸುಲಭ ಮಾರ್ಗ; ಸಕಲರೂ ಆಚರಿಸಬಹುದು. ಇದೇ ಜೀವನವನ್ನು ಪವಿತ್ರ ಮಾಡಿ ಸುಖವನ್ನು ತರುವ ಸಾಧನ.

೩೫

# ಗೋಪಾಲ ಎಲ್ಲಿ?

ರಾಮಸ್ವಾಮಿಗೌಡನು ಒಂದು ದಿನ ಅರ್ಧರಾತ್ರಿಯಲ್ಲೆದ್ದು ಸ್ವಲ್ಪ ದೂರದಲ್ಲಿದ್ದ ಮತ್ತೊಂದು ಗುಡಿಸಿಲಿಗೆ ಹೋಗಿ, "ತಿಮ್ಮೇಗೌಡರೇ! ತಿಮ್ಮೇಗೌಡರೇ!" ಎಂದು ಬಾಗಿಲು ತಟ್ಟಿದ. ತಿಮ್ಮೇಗೌಡನು ಎದ್ದು ಬಾಗಿಲನ್ನು ತೆರೆದು, "ಏನು ರಾಮೇಗೌಡರೇ! ಇದೇನು ಈ ಹೊತ್ತಿನಲ್ಲಿ? ಏನುಬೇಕು?" ಎಂದನು.

"ಬೆಂಕಿಕಡ್ಡಿ ಬೇಕಾಗಿತ್ತು! ಇದ್ದರೆ ಕೊಡಿ, ಬೀಡಿ ಕುಡಿಯ ಬೇಕೆನಿಸುತ್ತದೆ!" ಎಂದ ರಾಮೇಗೌಡ. ತಿಮ್ಮೇಗೌಡನು ನಗುತ್ತಾ, "ಭೇಷ್, ನಿಮ್ಮ ಕೆಲಸ ತಮಾಷೆಯಾಗಿದೆ! ಕೈಯಲ್ಲಿ ಲಾಂದ್ರವನ್ನು ಹೊತ್ತಿಸಿ ಹಿಡಿದಿರುವಿರಿ, ನನ್ನನ್ನು ಹುಡುಕಿಕೊಂಡು ಇಷ್ಟು ದೂರ ಈ ರಾತ್ರಿಯಲ್ಲಿ ಬಂದು ಬೆಂಕಿಕಡ್ಡಿಯನ್ನು ಕೇಳುವಿರಲ್ಲಾ!" ಎಂದಾಶ್ಚರ್ಯ ಪಟ್ಟ.

ಲಾಂದ್ರವನ್ನು ಹಿಡಿದುಕೊಂಡು ಹೋದ ರಾಮೇಗೌಡ ತನ್ನ ಹತ್ತಿರ ಬೆಂಕಿಯು ಸಿದ್ಧವಾಗಿರುವುದನ್ನು ಗಮನಿಸದೆ, ಅರ್ಧರಾತ್ರಿಯಲ್ಲಿ ತಿಮ್ಮೇಗೌಡನ ಮನೆಗೆ ಹೋಗಿ ಬೆಂಕಿಯನ್ನು ಕೇಳುತ್ತಾನೆ!

ಹೃದಯದಲ್ಲಿ ದೇವರನ್ನಿಟ್ಟುಕೊಂಡು "ದೇವರೆಲ್ಲಿ? ದೇವರೆಲ್ಲಿ?" ಎಂದು ಕೇಳುತ್ತಾ ಅಲೆಯುವರ ಅಜ್ಞಾನವನ್ನು ಉಪಹರಿಸುವುದಕ್ಕೇ ಶ್ರೀರಾಮಕೃಷ್ಣರು ಈ ಕಥೆಯನ್ನು ಹೇಳುತ್ತಾರೆ. ಅವರೊಂದು ಸಲ ತಮ್ಮ ಎದೆಯನ್ನು ಮುಟ್ಟಿ ತೋರಿಸುತ್ತಾ, "ದೇವರು ಇಲ್ಲಿರುವುದನ್ನು ಒಬ್ಬನು ಅರಿತುಕೊಂಡರೆ, ಬಳಿಕ ಆ ದೇವರು ಬಾಹ್ಯ ಜಗತ್ತನ್ನೆಲ್ಲಾ ವ್ಯಾಪಿಸಿರುವುದನ್ನೂ ಅವನು ಕಾಣುವನು" ಎಂದರು.

ನಮ್ಮ ಹೃದಯದಲ್ಲಿ ಈಶ್ವರನನ್ನು ಕಾಣದೆ ಹೋದರೆ ಬೇರೆಲ್ಲಿಯೂ ಅವನನ್ನು ನೋಡಲಾರೆವು. ಹೃದಯ ದೇವಾಲಯದಲ್ಲಿ ಪ್ರತಿಷ್ಠವಾಗಿರುವ ಆ ಮೂರ್ತಿಯನ್ನು ಸಾಕ್ಷಾತ್ಕರಿಸಿದರೆ ಬಳಿಕ ಕಾಶಿಯಲ್ಲೂ ಕಂಚಿಯಲ್ಲೂ ಕೂಡ ಆ ದಿವ್ಯದರ್ಶನ ಸಿಗುವುದು. ಇಡೀ ವಿಶ್ವವೇ ದೇವಾಲಯ ವೆಂಬುದನ್ನೂ ಅದರಲ್ಲಿ ಎಲ್ಲೆಲ್ಲೂ ಭಗವಂತನು ಮೂರ್ತೀಭವಿಸಿರುವುದನ್ನೂ

ಅರಿಯುತ್ತೇವೆ. ಭಗವಂತನು ನಮ್ಮೊಳಗೇ ಇರುವುದನ್ನು ತಿಳಿಯದೆ ಬಾಹ್ಯ ಜಗತ್ತಿನಲ್ಲೂ ಆಕಾಶ ಅಥವಾ ಅದರ ಮೇಲಿರುವ ಲೋಕಗಳಲ್ಲೂ ಅವನು ಸಿಗುವನೆಂದು ಭಾವಿಸಿ ಹುಡುಕುವುದೆಲ್ಲಾ ಅಜ್ಞಾನ. ಜ್ಞಾನ ದೀಪವನ್ನು ಹೊತ್ತಿಸಿದೊಡನೆ ಅದರ ಪ್ರಕಾಶದಲ್ಲಿ ದೇವರು ನಮ್ಮ ಹೃದಯ ವೆಂಬ ಗುಡಿಯಲ್ಲಿಯೇ ನೆಲಸಿರುವುದನ್ನು ಕಾಣುತ್ತೇವೆ.

ತನ್ನೊಳಗೇ ದೇವರನ್ನು ನೋಡುವುದು ಹೇಗೆ? ಇತರರು ಹೇಳು ವುದನ್ನು ಅಂಗೀಕರಿಸಿ ತಲೆಯಾಡಿಸಿದರೆ ದೇವರನ್ನು ಸಾಕ್ಷಾತ್ಕರಿಸಿದ ಹಾಗಾಗುತ್ತದೆಯೇ? ಸತ್ಯವನ್ನು ಕೇಳಿ ತಿಳಿದುಕೊಂಡ ಬಳಿಕ, ಅದರ ಫಲವಾಗಿ ಜೀವನದಲ್ಲಿ ಬದಲಾವಣೆಯುಂಟಾಗಬೇಕು. ಒಬ್ಬನು ಯಾವಾಗ ತನ್ನಲ್ಲಿಯೇ ಭಗವಂತನು ನೆಲೆಸಿರುವನು ಎಂದು ವಿವೇಕವನ್ನು ಪಡೆಯು ತ್ತಾನೆಯೋ ಅಂದಿನಿಂದಲೇ ತನ್ನ ಜೀವನವನ್ನು ಸಂಪೂರ್ಣವಾಗಿ ಮಾರ್ಪಡಿಸಿಕೊಳ್ಳುತ್ತಾನೆ. ಕಾಣದೆ ಹೋಗಿದ್ದ ಹಣದ ಗಂಟು ಜೇಬಿ ನಲ್ಲಿಯೇ ಇರುವುದನ್ನು ನೋಡಿದ ಒಬ್ಬ ಹೇಗೆ ವರ್ತಿಸುವನು? ಅಥವಾ ಸ್ವಪ್ನದಲ್ಲಿ ಮಗುವನ್ನು ಹುಡುಕಿ ಅಲೆದು ಕಾಣದೆ ದುಃಖಿಸಿ ತಪಿಸಿದ ತಾಯಿ ನಿದ್ರೆಯಿಂದೆಚ್ಚತ್ತು ಮುದ್ದುಕಂದ ಪಕ್ಕದಲ್ಲಿಯೇ ಸುಖವಾಗಿ ನಿದ್ರಿಸುತ್ತಿರು ವುದನ್ನು ಕಂಡಾಗ ಹೇಗೆ ನಡೆದುಕೊಳ್ಳುತ್ತಾಳೆ? ಸ್ವಲ್ಪ ಆಲೋಚನೆ ಮಾಡಿ ನೋಡಿ. ಹೃದಯ ದೇವಾಲಯದಲ್ಲಿ ಭಗವಂತನು ಮೂರ್ತೀ ಭವಿಸಿದ್ದಾನೆ ಎಂದರಿತರೆ ನಮಗುಂಟಾಗುವ ಆನಂದ ಎಂತಹುದು?

* * * *

“ಗೋಪಾಲ ಎಲ್ಲಿ ಹೋದ, ಇನ್ನೂ ಬರಲಿಲ್ಲವಲ್ಲಾ! ನಿನಗೇ ನಾದರೂ ಗೊತ್ತುಂಟೆ?” ಎಂದು ಯಶೋದಾದೇವಿ ಒಂದು ದಿನ ರಾಧೆ ಯನ್ನು ವಿಚಾರಿಸಿದಳಂತೆ. ಆಗ ತಾನೆ ನಿದ್ರೆಯಿಂದೆಚ್ಚತ್ತ ರಾಧೆ ಯಶೋದೆ ಯನ್ನು ಸತ್ಕರಿಸಿ,

“ತಾಯೇ! ಏಕೆ ಚಿಂತಿಸುವಿ? ಕಣ್ಣು ಮುಚ್ಚಿಕೊಂಡು ಗೋಪಾಲ ನನ್ನು ಧ್ಯಾನಿಸಿದರೆ ಆಕ್ಷಣವೇ ಗೋಪಾಲ ಬರುತ್ತಾನೆ!” ಎಂದಳು.

ಯಶೋದೆ “ರಾಧೆ, ಇದು ನಿನ್ನ ಭಕ್ತಿ ಪ್ರಭಾವದ ಶಕ್ತಿ. ನನಗೂ ಅದನ್ನುಪದೇಶಿಸು!” ಎಂದು ಬೇಡಿ ಉಪದೇಶವನ್ನು ಪಡೆದಳಂತೆ!

ನಾವೆಲ್ಲರೂ ರಾಧೆ, ಯಶೋದೆ, ಇವರ ಹಾಗೆ ಗೋಪಾಲನನ್ನು ಯಾವಾಗಲೂ ಎಲ್ಲಿ ಬೇಕಾದರೂ ನೋಡಬಹುದು. ಆದರೆ ದೇವಿ ರಾಧೆಯ

ಹಾಗೆ, ಯಶೋದಾ ಮಹಾತಾಯಿಯ ಹಾಗೆ, ಗೋಪಾಲನನ್ನು ನೋಡ ಬಯಸಬೇಕು. ಹೃದಯಾಂತರಾಳದಲ್ಲಿ ಆ ಬಯಕೆ ಉದಿಸಬೇಕು. ಉದಿಸಿದರೆ ದರ್ಶನ ಖಂಡಿತವಾಗಿಯೂ ಸಿಗುವುದೆಂಬುದೇ ಕಠೋಪನಿಷತ್ತು.



ಬೆಂಗಳೂರು ಪ್ರೆಸ್ ಮೈಸೂರು ಬ್ರಾಂಚಿನಲ್ಲಿ ಮುದ್ರಿಸಲ್ಪಟ್ಟಿತು—೯-೫೫

# ಶ್ರೀ ರಾಮಕೃಷ್ಣಾಶ್ರಮದ ಪ್ರಕಟನೆಗಳು, ಮೈಸೂರು.

| | ರೂ. | ಆ. | ಪೈ. |
|---|---|---|---|
| ಶ್ರೀ ರಾಮಕೃಷ್ಣ ವಚನವೇದ (ಉತ್ತರಾರ್ಧ) | ೧೦ | ೦ | ೦ |
| ಕೊಲಂಬೊ ಇಂದ ಆಲ್ಮೋರಕೆ | ೫ | ೦ | ೦ |
| ಸಂವಾದ ತರಂಗಿಣಿ | ೫ | ೦ | ೦ |
| ಶ್ರೀರಾಮಕೃಷ್ಣ ಉಪದೇಶಾಮೃತ | ೩ | ೮ | ೦ |
| ಪ್ರವಚನಾದಿ | ೩ | ೮ | ೦ |
| ಭಗವಾನ್ ಶ್ರೀ ರಾಮಕೃಷ್ಣ | ೩ | ೦ | ೦ |
| ಸ್ವಾಮಿ ವಿವೇಕಾನಂದ (ಕುವೆಂಪು) | ೩ | ೮ | ೦ |
| ಪತ್ರಮಾಲೆ | ೩ | ೦ | ೦ |
| ಜ್ಞಾನಯೋಗ | ೩ | ೦ | ೦ |
| ಜೀವ ಈಶ್ವರ ಧರ್ಮ | ೩ | ೦ | ೦ |
| ಗುರುವಿನೊಡನೆ ದೇವರಡಿಗೆ (ಕುವೆಂಪು) | ೩ | ೦ | ೦ |
| ಸ್ತವಕುಸುಮಾಂಜಲಿ | ೩ | ೦ | ೦ |
| ರಾಜಯೋಗ | ೨ | ೧೦ | ೦ |
| ಶ್ರೀ ಶಾರದಾದೇವಿ ಸಂಭಾಷಣೆ | ೨ | ೮ | ೦ |
| ಗೀತಾ ಪತ್ರಗಳು | ೨ | ೮ | ೦ |
| ಮಿಂಚುನೋಟಕೆ ಹಿಂದೂಧರ್ಮ | ೨ | ೮ | ೦ |
| ಶ್ರೀ ಶಾರದಾದೇವಿ | ೨ | ೦ | ೦ |
| ಸಾಧಕನ ಕೈದೀವಿಗೆ | ೨ | ೦ | ೦ |
| ಪರಮಾರ್ಥ ಪ್ರಸಂಗ | ೨ | ೦ | ೦ |
| ಕರ್ಮಯೋಗ | ೧ | ೮ | ೦ |
| ಸನಾತನ ಭಾರತ | ೧ | ೮ | ೦ |
| ಬ್ರಹ್ಮಾನಂದ ವಚನ ಸುಧೆ | ೧ | ೪ | ೦ |
| ಶ್ರೀ ರಾಮಕೃಷ್ಣ ಉಪನಿಷತ್ | ೧ | ೪ | ೦ |
| ಪರಿವ್ರಾಜಕ | ೧ | ೪ | ೦ |
| ಪ್ರಾಚ್ಯ ಮತ್ತು ಪಾಶ್ಚಾತ್ಯ | ೧ | ೪ | ೦ |
| ಭಕ್ತಿಯೋಗ | ೧ | ೦ | ೦ |
| ಭಕ್ತಿ: ಗೌಣೀ ಮತ್ತು ಪರಾ | ೧ | ೦ | ೦ |
| ದಾರಿಯಲ್ಲಿ ದೀಪಧಾರಿ | ೧ | ೦ | ೦ |

| | ರೂ. | ಆ. | ಪೈ. |
|---|---|---|---|
| ಶ್ರೀ ಗುರುದೇವರ ವಚನ .. .. .. | ೧ | ೦ | ೦ |
| ಅಮರನಾಥ ಯಾತ್ರೆ .. .. .. | ೧ | ೦ | ೦ |
| ಧನ್ಯತೆಗೆ ದಾರಿ .. .. .. | ೧ | ೦ | ೦ |
| ಅನುಷ್ಠಾನ ವೇದಾಂತ .. .. .. | ೧ | ೦ | ೦ |
| ವೇದಾಂತ .. .. .. | ೦ | ೧೦ | ೦ |
| ವಿದ್ಯಾಭ್ಯಾಸ .. .. .. | ೦ | ೧೦ | ೦ |
| ಹಿಂದೂ ಧರ್ಮಸಾರ .. .. .. | ೦ | ೧೦ | ೦ |
| ವರ್ತಮಾನ ಭಾರತ .. .. .. | ೦ | ೧೦ | ೦ |
| ವಿವೇಕವಾಣಿ .. .. .. | ೦ | ೧೦ | ೦ |
| ನನ್ನ ಗುರುದೇವ .. .. .. | ೦ | ೮ | ೦ |
| ಜ್ಞಾನಮಾರ್ಗ .. .. .. | ೦ | ೮ | ೦ |
| ಭಕ್ತಿಮಾರ್ಗ .. .. .. | ೦ | ೮ | ೦ |
| ಪುನರ್ಜನ್ಮ .. .. .. | ೦ | ೮ | ೦ |
| ಚಿಕಾಗೋ ಉಪನ್ಯಾಸ .. .. .. | ೦ | ೬ | ೦ |
| ಆರತಿ .. .. .. | ೦ | ೬ | ೦ |
| ಶ್ರೀ ರಾಮಕೃಷ್ಣ (ಸಂಕ್ಷಿಪ್ತ ಜೀವನ ತ್ರಿವೇಣಿಯಿಂದ) | ೦ | ೫ | ೦ |
| ಸ್ವಾಮಿ ವಿವೇಕಾನಂದ ,, ,, ,, .. | ೦ | ೫ | ೦ |
| ಶ್ರೀ ಶಾರದಾದೇವಿ ,, ,, ,, .. | ೦ | ೫ | ೦ |
| ಮುಮುಕ್ಷು ಲಕ್ಷಣ .. .. .. | ೦ | ೪ | ೦ |
| ನನ್ನ ಜೀವನ ಮತ್ತು ಧ್ಯೇಯ .. .. .. | ೦ | ೪ | ೦ |
| ಈಶ್ವರಾನುರಾಗ .. .. .. | ೦ | ೪ | ೦ |
| ನೊಂದ ಜೀವಕ್ಕೆ ಭರವಸೆ .. .. .. | ೦ | ೪ | ೦ |
| ಭಾರತ ಮಹಿಳೆ .. .. .. | ೦ | ೪ | ೦ |
| ಕರ್ಮ ರಹಸ್ಯ .. .. .. | ೦ | ೪ | ೦ |
| ಸಾಧನ .. .. .. | ೦ | ೪ | ೦ |
| ಪವಹಾರಿಬಾಬ .. .. .. | ೦ | ೪ | ೦ |
| ದೇವದೂತ ಕ್ರಿಸ್ತ .. .. .. | ೦ | ೪ | ೦ |
| ಧ್ಯಾನ .. .. .. .. | ೦ | ೪ | ೦ |
| ಹೈಮಾಚಲ ಸಾನ್ನಿಧ್ಯದಲ್ಲಿ .. .. .. | ೨ | ೦ | ೦ |
| (ಹರಿದ್ವಾರದಿಂದ ಕೇದಾರ ಬದರಿಗೆ) | | | |

ಪರಮಹಂಸರ ಉಪದೇಶ ಗ್ರಂಥ ಪಾಂಡಿತ್ಯದಿಂದ ಬಂದುದಲ್ಲ. ಅಧ್ಯಾತ್ಮ ಅನುಭವಗಳ ಅಂತರಾಳದಿಂದ ಹರಿದು ಬಂದ ಅಮರ ಗಂಗಾನದಿ. ಪಂಡಿತನಿಂದ ಪಾಮರನವರೆಗೆ ಇದು ರುಚಿಸುವುದು. ಈಗ ತಾನೆ ದಾಸ್ಯವಿಮೋಚನೆ ಪಡೆದ ಭರತಖಂಡ, ಯಾವ ಪರಮಹಂಸರ ಸಂದೇಶವನ್ನು ಅನುಸರಿಸಿದರೆ ಅತಿ ಪೂಜ್ಯ ಸ್ಥಾನವನ್ನು ಪಡೆಯಬಹುದೋ ಆ ದೃಷ್ಟಿಯಿಂದ ಆರಿಸಿ ಇಲ್ಲಿ ವಿವರಿಸಿದೆ.